

# ಅಂಬುಜಾಕ್ಷಿ

★

ಎಸ್. ವೆಂಕಟರಾಜ

ಶ್ರೀಕೃಷ್ಣ ಪ್ರಕಾಶನ, ಉಡುಪಿ.

# ಮುನ್ನುಡಿ

ಈ ಕಾದಂಬರಿಯನ್ನು ಬರೆದು ಇಂದಿಗೆ ಏಳು ವರ್ಷಗಳು ಕಳೆದಿರುವುವು. ಈ ಏಳು ವರ್ಷಗಳಲ್ಲೂ ಕನ್ನಡದಮ್ಮನ ಕಾದಂಬರಿಯ ಹೊಲ ಸಮೃದ್ಧವಾಗಿ ಬೆಳೆದು ಬಂದಿದೆ. ಸಮಾಜದಲ್ಲಿ ಕೊಳೆಯಾಗಿ ನಿಂತಿರುವ ಸೂಳೆಯ ಸಮಸ್ಯೆಯ ಕುರಿತು ಹಲಹಲವು ಕಾದಂಬರಿಗಳು ತಲೆದೋರಿವೆ. ಆ ಸಮಸ್ಯೆಯನ್ನು ವಿವೇಚನಾತ್ಮಕ ಸೂಕ್ಷ್ಮ ದೃಷ್ಟಿಯಿಂದ ಕಂಡು ಅದರ ಪರಿಹಾರಕ್ಕಾಗಿ ಹೆಣಗಾಡಿದ ದೃಷ್ಟಿಯ ಉತ್ತಮ ಕೃತಿಗಳು ಹಲವಾಗಿವೆ. ಆದರೂ ಆ ಸಮಸ್ಯೆ ಎಂದಿನಂತೆಯೇ ಎಲ್ಲರ ತಲೆಮರೆಸಿಕೊಂಡು ಇಂದಿಗೂ ಸಮಾಜದ ಸುಂದರೋದ್ಯಾನದಲ್ಲಿ ಬನ್ನಣಿಕೆಯಂತೆ ಹಬ್ಬಿ ಬೇರು ಬಿಟ್ಟಿದೆ. ರೋಗಮೂಲವಾದ ಅದರ ಉಚ್ಚಾಟನೆಗಾಗಿ ಯಾರು ಏನು ಬರೆದರೂ ಯಾವ ಕಡೆಯಿಂದ ಏನು ಸಲಹೆ ಬಂದರೂ ಅದೆಂದಿಗೂ ಹೆಚ್ಚೆನಿಸಲಾರದು. ಆದುದರಿಂದ ಅಂಬುಜಾಕ್ಷಿಯೂ ಒಮ್ಮೆ ಸಮಾಜದ ಮುಂದೆ ತನ್ನ ತಲೆ ಮುಸುಕನ್ನು ತೆರೆದು ನಿಂತಳೆಂದರೆ ಯಾರಿಗೂ ಬೇಸರ ಬರಲಾರದು ತಾನೆ?

ಯಾವ ಸಮಸ್ಯೆಯನ್ನೇ ಆದರೂ ಸಹನೆಯಿಂದ ಕಾಣಬೇಕಾದುದು ಸಮಾಜ ಧರ್ಮವಾಗಿದೆ. ದೋಷಗಳಿಗಾಗಿ ಹಲ್ಲಿರಿದು ಚಾಳಿಸುವುದು ವಿಹಿತವಲ್ಲ. ಯಾರ ತಪ್ಪಿನಿಂದಲೇ ಆಗಲಿ ಈ ಪ್ರಪಂಚದಲ್ಲಿ ದೋಷವಂತೂ ಹುಟ್ಟಿಯೇ ತೀರುತ್ತದೆ. ಅದನ್ನು ತಡೆಗಟ್ಟಲು ಯಾರಿಂದಲೂ ಸಾಧ್ಯ ಬರುವಂತಿಲ್ಲ. ಆದರೆ ಹುಟ್ಟಿಬಂದ ದೋಷಗಳ ಹಬ್ಬುವಿಕೆಯನ್ನು ತಡೆಗಟ್ಟುವುದಕ್ಕಾಗಿಯೇ ಹೋರಾಡಬೇಕಾದುದು ವಿವೇಕಿಯ ಸಾತ್ವಿಕ ಧರ್ಮವಾಗಿದೆ. ಇಲ್ಲಿ ಯಾರು ಯಾರು ತಪ್ಪುಗಾರರು? ಎಂದು ಕೋಲಾಹಲವೆಬ್ಬಿಸುತ್ತಿರುವುದು ಅಗತ್ಯವಲ್ಲ. ಯಾರ ತಪ್ಪೇಯಿರಲಿ ಯಾವ ತಪ್ಪೇಯಿರಲಿ ತಪ್ಪನ್ನು ತಪ್ಪೆಂಬುದಾಗಿ ತಿಳಿದು ಕೊಳ್ಳುವ ಸದ್ಭಾವನೆ ಬರುವನಕ ಸಮಾಜವನ್ನು ಬಯ್ದು ಉಪಯೋಗವಿಲ್ಲ. ರೋಗ ಹಬ್ಬುದುದು ಸಹಜವೆಂದಾದ ಮೇಲೆ ರೋಗವೇಕೆ ಅಂಟಿಕೊಂಡಿತೆಂದು ಆ ಬಡಪ್ರಾಣಿಯನ್ನು

ಗಮನಿಸುವುದರಲ್ಲಿ ಅರ್ಥವಿಲ್ಲ. ಅಂತಹ ರೋಗವು ಸಾಂಕ್ರಾಮಿಕವಾಗಿ ಪರಿಣಮಿಸದರೀತಿ ತಡೆಗಟ್ಟುವುದು, ಸಾಧ್ಯವಾದರೆ ಆ ರೋಗಿಯನ್ನು ಉದ್ಧರಿಸುವುದು ನಮ್ಮ ನೀತಿಯಾಗಿರಬೇಕು. ಅದಕ್ಕಾಗಿ ಆ ರೋಗವನ್ನೇ ಆಗಲಿ ರೋಗಿಯನ್ನೇ ಆಗಲಿ ಅಥವಾ ಅಂತಹ ರೋಗವು ಅಂಟಿಕೊಂಡ ವಿಧಾನವನ್ನೇ ಆಗಲಿ ಅತಿರಂಜಿತವಾಗಿ ತೋರಲೋಸುಗ ಶೀಲ ಸೌಂದರ್ಯದ ಎಲ್ಲೆಯನ್ನು ಮೀರುವುದರಿಂದ ನಾವೇನನ್ನೂ ಸಾಧಿಸಿದಂತಾಗಲಾರದು. ಇದರಿಂದ ನಮ್ಮ ಬಾಯಿತುರಿಕೆಗಾಗಿ ಚಾಪಲ್ಯಕ್ಕಾಗಿ ನಮ್ಮ ಸಂತಾನವನ್ನು ನಾವೇ ಅವಹೇಳನಗೊಳಿಸಿದಂತಾಗುವುದೇ ಹೊರತು ಮತ್ತೇನಿಲ್ಲ. ಆದುದರಿಂದ ಕಾದಂಬರಿಕಾರನಿಗೆ ಬೇಕಾದ ಕುಲಧರ್ಮವೆರಡೆ–ಒಂದು ದೋಷವನ್ನು ಅವಿಕಾರ ಮನಸ್ಸಿನಿಂದ ತಿಳಿಯಲಿರುವ ಒಳನೋಟ—ಎರಡನೆಯದಾಗಿ—ಸಮಾಜದ ಹಾಸು ಹೊದಿಕೆಯ ಸೌಂದರ್ಯ ಕೆಡದರೀತಿಯಲ್ಲಿ ಅದನ್ನು ತೋರಿಸಿ ಕಿತ್ತು ತೆಗೆಯುವ ಸದುದ್ದೇಶ. ಜಿಗಟೆಹತ್ತಿತೆಂದು ಸೀರೆಯನ್ನೇ ಸುಟ್ಟುತೆಗೆಯುವುದೂ ದೋಷತಟ್ಟಿತೆಂದು ಸಮಾಜವನ್ನೇ ಕಡಿದು ಬಿಡುವುದೂ ಎರಡೂ ಒಂದೇ ರೀತಿಯಾಗಿದೆ. ಸಮಾಜವನ್ನು ಬೀಳಕೆಡಹುವುದಲ್ಲ–ಸಾಂತ್ವನೆಯಿಂದ ಕೈ ಹಿಡಿದು ತಪ್ಪು ಹೆಜ್ಜೆಯಿಂದ ತಿದ್ದಿ ನಡೆಸಬೇಕು.

ಇಂತಹ ಸಾತ್ವಿಕ ಪ್ರವೃತ್ತಿಯಿಂದ ಅಂಬುಜಾಕ್ಷಿಯು ನೀತಿನಂತರ ಮನೆಯ ಹೆಬ್ಬಾಗಿಲ ಹೊಸ್ತಿಲುದಾಟಿ ಮುಂದೆ ಬಂದಿರುವಳು. ಇದು ತಾನಾಗಿ ಮುಂದೆ ಬಂದುದಲ್ಲ—ಏನೋ ಅಕಲ್ಪಿತವಾಗಿ ಯಾರೋ ತನ್ನನ್ನು ಬಯಲಿಗೆಳೆದು ನಿಲ್ಲಿಸಿರುವ ಹಾಳು ಹವ್ಯಾಸ!—ಎನ್ನುತಿರುವಳಾಕೆ! ಈ ಮಾತನ್ನು ನೀವು ನಂಬಿದರೂ ನಂಬಬಹುದು ಬಿಟ್ಟರೂ ಬಿಡಬಹುದು. ಸಮದೃಷ್ಟಿಯ ತೋಲನೆಯಿಂದ ತೂಗಿ ನೋಡಿರಿ! ಮತ್ತೆ ಸಮಾಜದ ಗಾಜಿನ ಮನೆಗೆ ಕಲ್ಲು ಹೊಡೆಯದೇನೇ ಅದನ್ನು ಹೇಗೆ ಉಳಿಸಿಕೊಳ್ಳಬಹುದೆಂಬುದನ್ನು ನೀವೇ ನಿರ್ಣಯಿಸಿ ಹೇಳಿರಿ!

ಅಂತೂ ಅಂಬುಜಾಕ್ಷಿಯು ದೋಷಿಯಾದರೂ ನಿರ್ದೋಷಿ!

೨೧—೧೦—೧೯೩೫

**ಯಸ್. ವೆಂಕಟರಾಜ.**

ಎಸಳು ಪುಟ

# ಅಂಬುಜಾಕ್ಷಿ

## ಎಸಳು ೧ — ತೆರೆದ ಬಾಗಿಲು

ಓ—ಎಂದು ಬಾಗಿಲು ಹಾಕಿಕೊಳ್ಳಲು ಬಂದ ಹೆಣ್ಣು ಮಗಳು ಅಪರಿಚಿತನನ್ನು ಕಂಡು ಅಲ್ಲೇ ಹಿಂದೆ ನಿಂತಳು. ಹಾಗೆಯೇ ನಿಂತಿದ್ದು ಸ್ವಲ್ಪ ಹೊತ್ತು ಯೋಚಿಸಿ ಮತ್ತೆ ಮೃದುವಾಗಿ—ಒಳಗೆ ಬರಬಹುದಲ್ಲ? ಹೊರಗೆ ತುಂಬಾ ಮಳೆ—ಎಂದಳು.

ಒಳಗೆ ಬರಲು ಹೇಳಿದಾಕೆ ಸುಮಾರು ಇಪ್ಪತ್ತು ವರ್ಷಪ್ರಾಯದವಳು. ಸುಂದರಿ. ಅದರಲ್ಲೂ ತೀರಾ ಪರಿಚಯವಿಲ್ಲದವಳು. ಆದುದರಿಂದಲೇ ಅವನು ಕೊಂಚ ಯೋಚನೆಗೀಡಾದ. ಮಳೆಗಾಲದಲ್ಲಿ ಕೊಡೆ ಬಿಟ್ಟು ದಾರಿಗಿಳಿದುದೇ ಹೆಡ್ಡತನ. ಕಾರ್ತಿಂಗಳ ಮೊದಲ ಮಳೆ ಹೇಳದೆ ಕೇಳದೇನೇ ಸುರಿದು ಬಿಡುತ್ತದೆ. ಮುಂಜಾನೆಯಿಂದ ಈ ತನಕ ನಿರಭ್ರವಾಗಿದ್ದ ಬಾನು ಈಗಿಂದೀಗ ಮೋಡಕವಿದು ಕಪ್ಪಿಟ್ಟು ಗರ್ಜಿಸಿ ಸೋರು ಮಳೆ ಸುರಿಯತೊಡಗಿದೆ. ಮಳೆ ಬರಲಾರದೆಂಬ ಎಣಿಕೆಯಿಂದ ಬೀದಿಗಿಳಿದು ಪೇಟೆಗೆ ಬಂದ ಮನುಷ್ಯ ಕೆಲಸ ಕೆಟ್ಟಿತೆಂದು ತಿಳಿದು ಕಕ್ಕಾಬಿಕ್ಕಿಯಾಗಿ ಪಕ್ಕದ ಮನೆಯ ಜಗಲಿಯೇರಿ ನಿಂತಿದ್ದನು. ಹೊಸ ಮಳೆಗೆ ಮೈಯೊಡ್ಡಿ ನನೆಯಲು ಯಾವನೂ ಇಷ್ಟಪಡಲಾರನು. ಯಾರ ಮನೆಯಾದರೇನು?

ಕ್ಷಣಕಾಲ ನಿಂತಿದ್ದು ಮಳೆಯು ಸ್ವಲ್ಪ ಹಗುರವಾದ ಮೇಲೆ ಮುಂದೆ ಸಾಗೋಣವೆಂದು ಅಂಜಿಯುಂಜಿ ನಿಂತಿದ್ದನು. ಆದರೆ ಮಳೆಯು ಒಮ್ಮೆಗೆ ನಿಲ್ಲುವ ಲಕ್ಷಣವಂತೂ ಕಂಡುಬರಲಿಲ್ಲ. ಆಗಲಾಗ ಮನೆಯಾಕೆ ಇದಿರುಗಡೆಯ ಬಾಗಿಲು ಸರಿಸಿಕೊಳ್ಳಲು ಬಂದು ಹೊರ ಹಣಕಿ ನಿಂತಿದ್ದ ವ್ಯಕ್ತಿಯನ್ನು ಕಂಡು ಸೌಜನ್ಯದಿಂದ ಒಳಗಡೆ ಬರಲು ಹೇಳಿದಳು. ಆದರೆ ಅವನು ಒಳಗೆ ಹೋಗಲೋ ಬೇಡವೋ ಎಂಬ ಎಣಿಕೆಗಳಿಂದ ತೂಗುತ್ತ ಹಾಗೆಯೇ ನಿಂತಿದ್ದನು. ಹೆಣ್ಣುಮಗಳು ಕ್ಷಣಕಾಲ ತಳುಬಿ ಬಾಗಿಲು ಹಾಕದೆ ಒಳಗಡೆ ತೆರಳಿದಳು. ಸ್ವಲ್ಪ ಹೊತ್ತಿನ ಮೇಲೆ ನಲ್ವತ್ತರ ನಡುಪ್ರಾಯದವಳು ಬಂದು ಅವನ ಕಡೆ ನೋಡಿ—ಏನು ಮಳೆಯಪ್ಪ ಇವತ್ತು! ಹೊರಗೆಯೇ ನಿಂತಿದ್ದೀರಲ್ಲ? ಬನ್ನಿ—ಒಳಗೆ ಬನ್ನಿ!

ಅವನು ಮತ್ತೂ ಅಂತೆಯೇ ನಿಂತಿದ್ದ.

ಸಂಕೋಚವೇನೂ ಇಲ್ಲ. ಮಳೆಗೆ ಮೈ ಒದ್ದೆ ಮಾಡಿಕೊಳ್ಳೋದು ಏಕೆ?—ಎಂದಳು.

ಅವನು ಒದ್ದೆಯಾದ ವಸ್ತ್ರದ ನಿರಿಕೊಸರಿಕೊಂಡು ಒಳ ಹೊಕ್ಕನು. ಚಿಕ್ಕ ಮನೆ–ಅಚ್ಚುಕಟ್ಟಾಗಿದ್ದಿತು. ನಡುಸಾಲೆ; ಪಕ್ಕದ ಎರಡು ಕೋಣೆಗಳು, ಮೇಲೆ ಉಪ್ಪರಿಗೆ. ನಡುಸಾಲೆಯಲ್ಲಿ ನಾಲ್ಕು ಕೆಲಂಡರುಗಳು ಒಂದು ರಾಧಾಕೃಷ್ಣಪಟ. ಎರಡು ಕೋಣೆಗಳ ಬಾಗಿಲ ಮೇಲೆ ಹೊಂದಿಕೆಯಾಗಿ ಎರಡು ವರ್ಣ ಚಿತ್ರಗಳು. ಒಂದರಲ್ಲಿ ಕೃಷ್ಣನು ನೀರಿಗೆ ಹೊರಟ ರಾಧೆಯ ಸೆರಗುಹಿಡಿದಿದ್ದನು. ಮತ್ತೊಂದು ಭಾವಚಿತ್ರ. ಅವನು ಅವನ್ನೇ ನೋಡುತ್ತ ಅಲ್ಲೇ ಇದಿರುಗಡೆಯ ಕುರ್ಚಿಯಲ್ಲಿ ಕುಳಿತನು. ಒತ್ತಿಗೆ ಕಸೂತಿ ಹಾಕಿದ ಮೇಲು ಹೊದಿಕೆಯ ಚಿಕ್ಕದುಂಡು ಮೇಜು. ಆ ಕಸೂತಿಯ ಕಲೆ ಬಹಳ ಪರಿಶ್ರಮದ್ದಾಗಿದ್ದಿತು. ಸಿಲ್ಕಿನ ನೂಲಿನೆಳೆಗಳಿಂದ ಅದರ ಮೇಲೆ ರವಿವರ್ಮನ ವಿಶ್ವಾಮಿತ್ರ ಮೇನಕೆಯರ ಚಿತ್ರವು ಚಿತ್ರಿತವಾಗಿದ್ದಿತು. ಅದರ ಕೊನೆಯಲ್ಲಿ 'ಅಂಬು' ಎಂಬ ಹೆಸರು ಬರೆದಿದ್ದಿತು. ಅವನು ಆ ಹೆಸರನ್ನೊಮ್ಮೆ ಓದಿ ಮೇಲುಗಡೆಯ ಚಿತ್ರವನ್ನು ನೋಡಿದ. ಎಂದರೆ

ಆ ಚಿತ್ರವನ್ನೂ ಬರೆದ ಕಲಾವಿದಳು ಅವಳೇ! ಮೊತ್ತಮೊದಲಿಗೆ ಬಾಗಿಲೆಡೆಗೆ ಬಂದು ಒಳಬರಹೇಳಿದ ಆ ಹೆಣ್ಣು ಮಗಳೇ ಏನೊ!

ಮನೆಯಲ್ಲಿ ಹೆಚ್ಚು ಜನರಿದ್ದಂತೆ ಕಂಡು ಬರಲಿಲ್ಲ. ಕೆಲಸದವಳು ಆ ಕಡೆ ಈ ಕಡೆ ಅಡ್ಡಾಡುತ್ತಿದ್ದಳು. ಮಳೆಯಿಂದ ತೋಯ್ದು ಲಂಗದ ಹತ್ತು ವರ್ಷದ ಹುಡುಗಿ ಶಾಲೆಯಿಂದ ಒದ್ದೆ ಚೀಲದ ಪುಸ್ತಕ ಹೊತ್ತು ಒಳಗೆ ಬಂದಳು. ಮತ್ತಾರೂ ಗಂಡಸರ ಸುಳಿವು ಕಂಡುಬರಲಿಲ್ಲ. ಪ್ರಾಯಶಃ ಉದ್ಯೋಗಕ್ಕಾಗಿ ಪೇಟೆಗೆ ಹೋಗಿರಬಹುದೆಂದು ಅವನು ಭಾವಿಸಿಕೊಂಡನು.

ಪಿರಾಲಾ—ಮಳೆಯಲ್ಲಿ ಪೂರಾ ಒದ್ದೆಯಾಗಿ ಬಂದಿಯಲ್ಲಮ್ಮ. ಕೊಂಚ ಶಾಲೆಯಲ್ಲೇ ನಿಂತು ಬಂದಿದ್ದರೇನಾಗುತ್ತಿತ್ತು? —ಎಂದು ಚಿಕ್ಕವಳನ್ನು ಒಳಗೆ ಕಳುಹಿಸಿ ನಡುಹರಯದವಳು ಅಬ್ಬಾ—ಏನು ಮಳೆಯಪ್ಪ!—ಎಂದು ಅವನ ಕಡೆ ತಿರುಗಿ—ನೀವು ಈ ಊರಿಗೆ ಹೊಸಬರೋ ಏನೋ—ಎಲ್ಲೂ ಕಂಡಂತೆ ಜ್ಞಾಪಕವಿಲ್ಲ!—ಎಂದಳು.

ಅವನು—ಹೌದು. ನಮ್ಮ ಊರು ಕಾಸರಗೋಡು. ಒಂದು ವರ್ಷದಿಂದ ಈಚೆ ಈ ಊರಿಗೆ ಬಂದಿದ್ದೇನೆ.

ಸರಕಾರಿ ಕೆಲಸವಿರಬಹುದು—

ಹೌದು. ಏನೋ ಚಿಕ್ಕ ಕೆಲಸ.

ಚಿಕ್ಕದೇನು ದೊಡ್ಡದೇನು? ಅಂತೂ ಮನುಷ್ಯನಿಗೆ ಉದ್ಯೋಗ ಬೇಕು ನೋಡಿ!—

ಅಷ್ಟೆ! ನನಗೂ ನೋಡಿ—ಈ ಕಡೆ ಯಾರ ಪರಿಚಯವೂ ಇಲ್ಲ. ಹೆಚ್ಚಾಗಿ ನಾನು ಯಾರೊಡನೆಯೂ ಬಳಕೆಯಿಟ್ಟುಕೊಂಡಿಲ್ಲ. ಆಫೀಸಿನಲ್ಲಿ ಕೆಲಸವೂ ತುಂಬಾ ಇದೆ. ಮತ್ತೆ ಸಂಜೆ ದೇವಸ್ಥಾನದ ಕಡೆ ಕೆಲವೊಮ್ಮೆ ಬಂದರೆ ತಿರುಗಿ ನೇರವಾಗಿ ಹೋಟೆಲ್ ಸೇರಿ ಬಿಡುತ್ತೇನೆ.

ನೀವು ಬಿಡಾರ ತಂದಿಲ್ಲವೋ ಏನೊ?—ಎಂದು ಕೇಳಿದಳಾಕೆ.

ಬಿಡಾರವೇನು? ನಾನು ಒಬ್ಬಂಟಿಗ. ಮತ್ತೆ ಈ ಕಾಲದಲ್ಲಿ ಈ ಸಂಬಳದಲ್ಲಿ ಸಂಸಾರ ಕಟ್ಟಿಕೊಂಡಿರಲು ಸಾಧ್ಯವಿದೆಯೆ? ಎನುತ್ತಿದ್ದಂತೆ ಮೇಲುಗಡೆಯ ಪಟದ ಮೇಲೆ ದೃಷ್ಟಿ ಹರಿಸಿದ.

ಅವಳೇ ಅವನಿಗೆ ಮೊತ್ತ ಮೊದಲಿಗೆ ಬಾಗಿಲು ತೆರೆದು ಬರಹೇಳಿದವಳು. ನುಮಾರು ಇಪ್ಪತ್ತು ವರ್ಷದ ಹೊಸ್ತಿಲ ಮೇಲಿರುವವಳಾಕೆ! ನಿಜವಾಗಿಯೂ ಸುಂದರಿ. ಆ ಸೌಂದರ್ಯಕ್ಕೆ ಸಮಂಜಸವಾದ ವಿನಯ-ಗೌರವಗಳ ನೆಲೆಗಟ್ಟಿದೆ. ಅಂತಹ ಸೌಂದರ್ಯವು ವಿಭಿನ್ನವಾಗಿರುವ ಮುತ್ತಿನಂತಿರದೆ ಹಾರದಲ್ಲಿ ಏಕಸೂತ್ರವಾಗಿ ಕೋದುಬಂದ ಮುತ್ತಿನಂತೆ ಸಾಕಲ್ಯವಾಗಿದೆ. ಮೊದಲಿಗೆ ಬಾಗಿಲು ತೆರೆದು ಅವನನ್ನು ಕಂಡು ಓ-ಎಂದು ಆಶ್ಚರ್ಯಗೊಂಡು ನಿಂತ ಅವಳ ಆ ನಿಲುವು ಅವನ ಹೃದಯ ಪಟಲದ ಮೇಲೆ ಅಚ್ಚಳಿಯದೆ ಪ್ರತಿಬಿಂಬಿಸಿದೆ. ಕಾರಣ-ಆ ನಿಲುವಿನ ನೋಟದಲ್ಲಿ ಅಂತಹ ಬಿಗಿತವಿದ್ದಿತು!

ಅವನು ಅದನ್ನು ನೋಡುತ್ತಿದ್ದಂತೆ ಆ ಅಭಿಪ್ರಾಯವನ್ನು ಗ್ರಹಿಸಿ—ಅದು ನಮ್ಮ ಹುಡುಗಿ, ಅವಳಿಗೆ ತುಂಬಾ ನಾಚಿಕೆ ನೋಡಿ! ಏನೋ ನಿಮ್ಮನ್ನು ಕಂಡು ಬಾಗಿಲು ತೆರೆದು ಒಳಗೆ ಬರಲಿಕ್ಕೆ ಹೇಳಿದ್ದೆ ಆಶ್ಚರ್ಯ! ಈಗ ಒಳಗೆ ಜಾರಿಬಿಟ್ಟಿದ್ದಾಳೆ?—ಎಂದಳು.

ಅವನು ಅವಳ ಮಗಳ ಕುರಿತು ಇನ್ನೂ ಏನೋ ಕೇಳಬೇಕೆಂದಿದ್ದ. ಆದರೆ ಅದು ಉಚಿತವೋ ಪರಸ್ತ್ರೀ ವಿಷಯದಲ್ಲಿ ಅನುಚಿತವೊ ಎಂಬ ಜಿಜ್ಞಾಸೆಯಿಂದ ಮನಸ್ಸು ತಡೆದು ಮೇಲೆ ಕೆಳಗೆ ನೋಡುತಿದ್ದಂತೆ ಅವಳು-ಅಂಬೂ ಎಂದು ಕರೆದಳು.

ಆ ಕರೆಗೆ ಸಹಸಾ ಉತ್ತರ ಬರಲಿಲ್ಲ.

ಹಾಗೇನೇ! ಅವಳು ಯಾರ ಇದಿರಿಗೂ ಬರುವುದೇ ಇಲ್ಲ. ಮೆಟ್ರಿಕ್ ತನಕ ಕಲಿಸಿದ್ದೇನೆ ನೋಡಿ! ಆದರೂ ಹಿಂದಿನ ಹುಡುಗಿಯರ ಹಾಗೆ ಅಂಜುತ್ತಾ ಅಡಗಿ ಕುಳಿತಿರುತ್ತಾಳೆ. ಎನ್ನುತಿದ್ದಂತೆ ಏನೋ ಜ್ಞಾಪಿಸಿಕೊಂಡು—ಓ ಮರೆತೇ ಬಿಟ್ಟೆ! ನಿಮಗೆ ಸಿಗರೇಟಿನ ಸಂಪ್ರದಾಯವೋ ಏನೋ—ಸ್ವಲ್ಪ ತಾಂಬೂಲವಾದರೂ—

ಅವನು—ಬೇಡ ಏನೂ ಬೇಡ!—ಎನ್ನುತಿದ್ದಂತೆಯೇ ಆಕೆ ಒಳಗೆ ಹೋದಳು.

ಮಳೆ ಮತ್ತೂ ಬಿಟ್ಟಿದ್ದಿಲ್ಲ. ಬಾನು ಬಿರಿದಿದ್ದಂತೆ ಘೋರೆಂದು ಒಂದೇ ಸವನೆ ಧಾರಾಕಾರವಾಗಿ ಸುರಿಯುತಿದ್ದಿತು. ಮಳೆಗಾಲದ ಮೊದಲ

ಹನಿ ಪ್ರಾಯಕ್ಕೆ ಬರುವ ಹುಡುಗಿಯರ ಹುಚ್ಚು ನಗೆಯಂತೆ ಎಲ್ಲಾ ಸೀರೇ-ಎಲ್ಲಾ ತಂಪೇ!

ಆದರೂ ಅವನು ಯೋಚನೆಗೀಡಾದ. ಮಳೆ ಬಿಡುವಂತೆ ಕಾಣಲಿಲ್ಲ. ಕತ್ತಲಾಗಲು ತೊಡಗಿದ್ದಿತ್ತು. ಆ ಅಪರಿಚಿತರ ಮನೆಯಲ್ಲೇ ಎಷ್ಟು ಹೊತ್ತು ಕುಳಿತಿರಲು ಸಾಧ್ಯ? ಇನ್ನು ಕೊಡೆಯನ್ನು ಎರವು ಪಡಕೊಂಡು ಹೋಗಲೋ—ಎಂದು ಎಣಿಸುತ್ತಿದ್ದಂತೆ ಮನಸ್ಸು ಮತ್ತೊಮ್ಮೆ ಅವಳ ದರ್ಶನಕ್ಕಾಗಿ ಕಾತರಗೊಂಡಿದ್ದಿತು. ಒಮ್ಮೆ ಕಂಡು ಹೋಗಬೇಕು—ಎಂದು ಹೃದಯ ಹಾತೊರೆಯುತ್ತಿದ್ದಿತು. ಈ ಎಣಿಕೆಯಲ್ಲಿ ಮುಂದಿನ ಕಸೂತಿಯ ಮೇಜಿನ ವಸ್ತ್ರವನ್ನು ನಿರೀಕ್ಷಿಸ ತೊಡಗಿದ. ವಿಶ್ವಾಮಿತ್ರ ಮೇನಕೆಯರ ಆ ಸುಖಸಂಸರ್ಗ—ಮಗುವಿಗಾಗಿ ಅವರಿಬ್ಬರ ನಕಾರ—ಇದು ಬಹಳ ಚೋದ್ಯ ವಾಗಿ ಕಂಡಿತು.

ಹೋಗೇ—ತಾಂಬೂಲ ಕೊಟ್ಟು ಬಾರೇ! ಕೆಟ್ಟ ಹುಡುಗಿ!—

ಬೇಡಮ್ಮ, ನೀನೇ ಕೊಟ್ಟು ಬಾ.

ಸಾಕು ಸಾಕು. ಕೊಟ್ಟು ಬಾ! ನನಗೆ ಕೆಲಸವಿದೆ ಎಂದು ತಾಯಿ ಗಡುಸಾಗಿ ಮಾತಾಡಿದಳು.

ಆದರೆ ಅವಳು ಹೊರ ಹೊರಡಲಿಲ್ಲ. ಚಿಕ್ಕವಳು ಮಾತ್ರ ಪಕ್ಕದ ಬಾಗಿಲಿನಿಂದ ಹಣಕಿದಳು. ಅವನು ಸನ್ನೆಯಿಂದ ಅವಳನ್ನು ಕರೆದು ಪಕ್ಕ ದಲ್ಲಿ ಕುಳ್ಳಿರಿಸಿಕೊಂಡ. ಅವನಿಗೆ ಅವಳಿಂದ ಎಷ್ಟೋ ವಿಚಾರಗಳನ್ನು ತಿಳಿದುಕೊಳ್ಳಬೇಕಿದ್ದಿತು. ಈ ಮನೆಯವರ ಜಾತಿ—ನೀತಿ—ಪಂಥ-ಉದ್ಯೋಗ ಮತ್ತು ಮುಖ್ಯವಾಗಿ ಅವಳ ಅಕ್ಕನ ಕುರಿತು ತಿಳಿಯಲೆಂದು ಮಾತಿಗೆ ತೊಡಗಿದನು. ಆದರೆ ಅಷ್ಟರಲ್ಲೇ ತಾಯಿ ಒಳಗಡೆಯಿಂದ ವಿಶಾಲಾ—ಎಂದು ಕರೆದಳು. ಚಿಕ್ಕ ಹುಡುಗಿ ಒಳಗೋಡಿದ ಬಾಗಿಲಿನಿಂದಲೇ ಅವಳ ಅಕ್ಕ ನಾಚುತ್ತ ಮೆಲ್ಲನೆ ಬಂದು ವೀಳ್ಯದೆಲೆ ಹರಿವಾಣವನ್ನು ಇದಿರಿನ ಮೇಜಿನ ಮೇಲಿರಿಸಿ ಮೆಲ್ಲನೆ ಹಿಂದೆ ಸರಿಯ ತೊಡಗಿದಳು.

ಅವಳು ಬಾಗಿಲು ಮುಚ್ಚುವ ಹೊತ್ತಿಗೆ ತಾಯಿಯು ಒಳಗೆ ಬಂದು ಅವಳ ಕೈಹಿಡಿದು ಪಕ್ಕದಲ್ಲಿ ಬಗ್ಗಿ ಕುಳ್ಳಿರಿಸಿ ಕೊಂಡಳು. ಕುಳಿತುಕೊಂಡು ಅವನೊಡನೆ ಇಷ್ಟಾದರೂ ತಮ್ಮ ಹೆಸರು ಕೇಳಲಿಲ್ಲವಲ್ಲ!—ಎಂದಳು.

ಅವನು ವೀಳ್ಯದೆಲೆಯನ್ನು ಕೈಯಲ್ಲಿ ಹಿಡಿದು ತಿರುಗಿಸುತ್ತ ಎಂದ—ಶ್ರೀಧರಮೂರ್ತಿ. ನೀವು?

ನಾವೂ ಮೊತ್ತಮೊದಲು ನಿಮ್ಮ ಊರಿನವರೇ. ಮಂಜೇಶ್ವರ ನಮ್ಮ ಊರು. ಆದರೆ ಇಲ್ಲಿಗೆ ಬಂದು ಬಹಳ ಸಮಯವಾಯಿತು. ನಂತರ ಇವಳ ವಿದ್ಯಾಭ್ಯಾಸಕ್ಕಾಗಿ ಇಲ್ಲೀ ಇರಬೇಕಾಯಿತು.

ಅವರ ಹೆಸರು?

ಯಾರ ಹೆಸರು?

ಅವರ—ಎಂದು ಶ್ರೀಧರಮೂರ್ತಿ ದೊಡ್ಡ ಹುಡುಗಿಯ ಕಡೆ ಕೈ ತೋರಿಸಿದ.

ತಾಯಿಯು ನಕ್ಕು- ಇವಳನ್ನು ನೀವು ಅವರು ಇವರು ಎನ್ನುವುದೆ? ಅವಳ ಹೆಸರು ಅಂಬುಜಾಕ್ಷಿ. ಆದರೆ ಕರೆಯೋದು ಅಂಬು ಎಂತನೆ.

ಶ್ರೀಧರಮೂರ್ತಿ ಕಸೂತಿಯ ಕಡೆನೋಡಿ—ಹಾಗಾದರೆ ಇದು ಇವರದ್ದೇ ಕೈಗಾರಿಕೆ?

ಹೂ. ಇವಳದ್ದೆ. ಹುಡುಗಿಗೆ ಮಹಾ ಉದಾಸೀನ ನೋಡಿ. ಹೊಲಿಲಿಕ್ಕೆಲ್ಲಾ ಬರುತ್ತದೆ. ಅವಳಿಗೆ ಶಾಲೆಯಲ್ಲೂ ಪ್ರೈಸ್ ಸಿಕ್ಕಿದೆ .ಸಂಗೀತ ಎಂದರೆ ಪ್ರಾಣ! ಆದರೆ ಹೊಲಿಯೋದೂ ಇಲ್ಲ. ಹಾಡುವುದೆಂದರೆ ವರ್ಷಕ್ಕೊಮ್ಮೆ ಯುಗಾದಿಯ ದಿವಸ. ಅದೂ ನನ್ನ ಒತ್ತಾಯಕ್ಕೆ!

ಅವನು ಅವಳನ್ನು ಒಮ್ಮೆ ಕದ್ದು ನೋಡಿದ. ಅವಳೂ ಹಾಗೇನೇ ನೋಡುತ್ತಿದಳು. ಆದುದರಿಂದ ಕಣ್ಣುರಿಬ್ಬರೂ ಸಿಕ್ಕಿ ಬಿದ್ದರು.

ಅವಳು ನಾಚುಗೆಯಿಂದ ತಾಯ ಕೂಡೆ–ಸಾಕಮ್ಮ ನೀನು ಸಮ್ಮನೇ ಹೇಳೋದು!—ಎಂದಳು.

ತಾಯಿ ನಗುತ್ತ—ಸುಮ್ಮನೆಯೇನು? ಮತ್ತೆ ನೀನು ಹೊಲಿದು ರಾಶಿ ಹಾಕಿದ್ದು ಎಲ್ಲಾ ಕಾಣುತ್ತವಲ್ಲ!

ನೀನೇ ಮತ್ತೆ ಕಣ್ಣು ಹಾಕಾಗುತ್ತದೆ; ಬೇಡ ಅನ್ನುತ್ತೀಯಲ್ಲ?

ನಾನು ಏನ ಅನ್ನೋದೂ ಬೇಡ ಎಂದೆನೆ?

ಅದು ಈಗ ಮಳೆಬರುತ್ತದೆ. ಸೀತ ಆಗುತ್ತದೊ ಏನೋ–ಹಾಡೋದು ಹೇಗೆ?

ಶ್ರೀಧರನಿಗೆ ಉತ್ತರ ಕೇಳಿ ಬಹಳ ಸೊಗಸಾಗಿ ಕಂಡು ನಕ್ಕುಬಿಟ್ಟ. ಎಲ್ಲರೂ ನಕ್ಕರು. ಒಂದಿಗೆ ಗಂಟೆಯೂ ನಕ್ಕು ಎಂಟು ಹೊಡೆಯಿತು.

ಗಂಟೆಯು ಹೊಡೆತ ಕೇಳಿ ಅವನಿಗೆ ಎಚ್ಚರವಾಯಿತು. ಮಳೆ ತುಸು ತುಸು ಬರುತ್ತಲೇ ಇದ್ದಿತ್ತು. ಆದರೂ ಎದ್ದು ನಿಂತ.

ಅವನ್ನು ನೋಡಿ ಹಿರಿಯವಳು—ಹೋ? ನಿಮಗೆ ಹೊತ್ತಾಯಿತಲ್ಲ. ಇನ್ನೂ ಮಳೆ ನಿಂತಿಲ್ಲ. ಹಾಗಾದರೆ ಕೊಡೆ ಕೊಂಡುಹೋಗಿ—ಎಂದು ಮಾರ್ಗದ ಕಡೆ ನೋಡಿದಳು.

ಅಂಬುಜಾಕ್ಷಿ ಒಳಗಿನಿಂದ ಕೊಡೆ ತಂದು ಮುಂದಿರಿಸಿದಳು. ಶ್ರೀಧರ ಮೂರ್ತಿ—ಬಹಳ ಉಪಕಾರವಾಯಿತು. ನಿಮಗೆ ತೊಂದರೆ ಇಲ್ಲವಾದರೆ ನಾಳೆ ಸಂಜೆತಂದು ಮುಟ್ಟಿಸುತ್ತೇನೆ—ಎಂದು ಹೇಳಿ ಹೊರಡಲನುವಾದ. ಆದರೆ ಅವನ ಹೆಜ್ಜೆಯನ್ನು ಅವಳ ನೀಳ್ನೋಟ ಅಲ್ಲಿಗಲ್ಲಿಗೇ ಬಿಗಿದಿದ್ದಿತು!

## ಎಸಳು ೨ — ಪುನಃ ಪ್ರವೇಶ

ಶ್ರೀಧರಮೂರ್ತಿ ಹೋಟೆಲ್ ಸೇರಿ ಊಟತೀರಿಸಿ ಹಾಸುಗೆಯ ಮೇಲೆ ಹೊರಳಾಡಿದನು. ಅಂಬುಜಾಕ್ಷಿಯ ಸ್ಫುರದ್ರೂಪವು ಅವನ ಕಣ್ಣುಗಳನ್ನು ತೆರೆದಿದ್ದಿತು. ಆ ಸಂಜೆಯ ಹೊಸ ಸಂಪರ್ಕದ ಸವಿನೆನಪು ಅವನನ್ನು ನಿದ್ದೆ ಮಾಡಲೀಸಲಿಲ್ಲ. ಹಾಸುಗೆ ಬಿಟ್ಟೆದ್ದು ಕಿಟಕಿಯ ಬಳಿ ನಿಂತು ಆಕಾಶದ ಕಡೆ ನೋಡತೊಡಗಿದನು. ಮಳೆಯು ಆಗ ತಾನೇ ನಿಂತಿದ್ದು ಮೋಡಗಳು ಚೆದರಿ ತೆಳುಗಾಳಿ ಬೀಸುತಿದ್ದಿತು. ಆ ಗಾಳಿಗೆ ಮೈಯೊಡ್ಡಿ ಮೆಲ್ಲ ಮೆಲ್ಲನೆ ಹಾಡತೊಡಗಿದ—

ತುಮುನೇ ಮುಝುಕೋ ಪ್ರೇಮಸಿಖಾಯಾ—

ಹಾಡುತಿದ್ದಂತೆ— ಮಳೆ ಬರುತ್ತದೆ; ಸೀತವಾಗುತ್ತದೋ ಏನೋ! ಹಾಡೋದು ಹೇಗೆ?—ಎಂದ ಅಂಬುಜಾಕ್ಷಿಯ ಮಾತಿನ ನೆನಪು ಬಂದು ತನ್ನಷ್ಟಕ್ಕೆ ತಾನೇ ನಗತೊಡಗಿದ. ಅದು ಹರಯದ ಹುಚ್ಚುನಗೆ. ಹೃದಯವು ಹೆಣ್ಣಿಗಾಗಿ ಹುಚ್ಚಾದಾಗ ಹಾಗೆನೇ ಎಣಿಸಿ ಎಣಿಸಿ ನಗುವುದಿದೆ. ಆ ನಗೆಗೆ ಅರ್ಥವಿಲ್ಲದಿರಬಹುದು. ಆದರೆ ಅನುಭವದ ಆಳವಿದೆ. ಅಂತಹ ಅನುಭವದ ಆಳವ ಕಡೆ ಎಷ್ಟು ಕೈನೀಡಿದರೂ ಅವನಿಗೆ ಈ ವಿಚಾರವು ನಿಲುಕಲಿಲ್ಲ. ಅವಳಿಗೆ ಏಕೆ ಇನ್ನೂ ಮದುವೆಯಾಗಿಲ್ಲ? ಆಗಿದ್ದರೆ ಆ ಮನೆಯಲ್ಲಿ ಯಾವ ಗಂಡಸಿನ ಸಂಚಾರವೂ ಕಂಡು ಬಂದಿಲ್ಲವೇಕೆ?

ಶ್ರೀಧರಮೂರ್ತಿ ಮತ್ತೊಮ್ಮೆ ಹಾಡಿದ. ಮತ್ತೊಮ್ಮೆ ಹಾಸುಗೆಯ ಮೇಲೆ ಬಿದ್ದು ಹೊರಳಾಡಿದ. ರಾತ್ರಿಯಲ್ಲಿ ಜೀವಿಗೆ ನಿದ್ರೆಬರುವುದು ಸಹಜ. ಹಾಗೆ ಬಾರದೆ ಹೋದರೆ ಅವನ ಮನಸ್ಸೇ ಅವನೊಡನೆ ಸೆಣಸುವುದು. ಅವನ ನಿಶ್ವಾಸವೇ ಪ್ರಪಂಚದ ಅನಂತ ಶಾಂತಿಯನ್ನು ಹೊಯ್ದು ಹೆಚ್ಚಳ ಗೊಳ್ಳುವುದು. ಅವನ ಎದೆಯ ಡಡಡಡಕೆಯೇ ಅವನೊಡನೆ ಗುದ್ದಾಡು ವುದು. ಇಂತಹ ಪರಿಸ್ಥಿತಿಯಲ್ಲಿ ಜೀವಿಯು ತನ್ನ ಹೃದಯದ ಸಾಂತ್ವನೆ ಗಾಗಿ ನೆನಪಿನ ನೆರವುಗೊಂಡು ಹಿನ್ನಡೆಯುವನು. ಇಂತಹ ಹಿನ್ನೋಟದಲ್ಲಿ ಶ್ರೀಧರಮೂರ್ತಿಯು ತನ್ನನ್ನೇ ತಾನು ಕಂಡುಕೊಂಡನು.

ಕಂಡುಕೊಂಡುದೇನು? ಕಾಸರಗೋಡಿನ ಕರಾವಳಿಯ ಪ್ರಾಂತದಲ್ಲಿ ಹವೀಕ ಬ್ರಾಹ್ಮಣರ ಕುಲದಲ್ಲಿ ಅವನ ಜನನವಾಗಿದ್ದಿತು. ಹುಟ್ಟಿ ಹತ್ತು ವರ್ಷಗಳಲ್ಲಿ ತಾಯಿ ತೀರಿಹೋದಳು. ಮತ್ತೆ ಎರಡು ವರ್ಷಗಳಲ್ಲಿ ತಂದೆ ಮತ್ತೊಮ್ಮೆ ಮದುವೆಯಾಗುವ ಲಾಲಸೆಗೆ ಗಂಟುಬಿದ್ದನು. ಇದರಿಂದಾಗಿ ಶ್ರೀಧರನ ಸಂಸಾರ ಯಾತ್ರೆ ಸುಖಮಯವಾಗಲಿಲ್ಲ. ಹೈಸ್ಕೂಲು ವಿದ್ಯಾ ಭ್ಯಾಸ ಮುಗಿದ ಮೇಲೆ ತಂದೆಯು ಮಗನನ್ನು ಮನೆಯಿಂದ ಹೊರದಬ್ಬುವು ದಕ್ಕಾಗಿಯೇ ಕೋಲೇಜಿನ ವ್ಯಾಸಂಗಕ್ಕಾಗಿ ಮಂಗಳೂರಿಗೆ ಕಳುಹಿಸಿದನು. ನಾಲ್ಕು ವರ್ಷಗಳ ಕಾಲ ಮಂಗಳೂರಲ್ಲಿ ಅವನ ಜೀವನವು ಸುಖಕರವಾಗಿ ಸಾಗಲಿಲ್ಲ. ಹಣಕ್ಕಾಗಿ ಕಂಡವರ ಕಾಲು ಹಿಡಿಯಬೇಕಾಯಿತು. ಮನೆ ಮನೆ ಸುತ್ತಿ ಬೇಡಬೇಕಾಯಿತು. ಆದರೂ ಆ ಪರಿಶ್ರಮವು ನಿರರ್ಥಕವಾಗ ಲಿಲ್ಲ. ಪರೀಕ್ಷೆಯಲ್ಲಿ ಯಶಸ್ಸು ಅವನ ಕೈ ಹಿಡಿದು ಬಿ. ಎ. ತನಕ ಸಾಗಿ ಸಿತು. ವಿದ್ಯೆಯನ್ನು ಸಾಧಿಸುವತನಕದ ಹುರುಪು ಮತ್ತೆ ನಿಂತಿರುವುದಿಲ್ಲ. ಯಾವ ಆದರ್ಶದ ವಿಶ್ವ ಸೃಷ್ಟಿಗಾಗಿ ಮನುಷ್ಯನು ಹೋರಾಡುವನೋ ನಂತರ ಆ ಕಡೆಸಾಗಿ ಕಣ್ದೆರೆವಾಗ ಎಲ್ಲವೂ ಕಗ್ಗತ್ತಲಾಗಿ ಕಂಡು ಬರುವುದು. ಆಶೆಯು ಜೀವಿಯ ಮಾರ್ಗದರ್ಶನವಾದರೆ ನಿರಾಶೆಯು ಮಾರ್ಗಘಾತಕ ವಾಗುವುದು.

ಇಂತಹ ದಾರುಣ ಸಂದರ್ಭಗಳೊಡನೆ ಸಮಯೋಚಿತವಾಗಿ ಹೋರಾಡಿ ಶ್ರೀಧರಮೂರ್ತಿಯು ಕಟ್ಟಕಡೆಗೆ ರೆವಿನ್ಯೂ ಇಲಾಖೆಯಲ್ಲಿ

ಒಂದು ಗುಮಾಸ್ತಗಿರಿಯನ್ನು ಹೊಂದಿಸಿಕೊಂಡನು. ಆದರೆ ನಮ್ಮ ತಾಲೋಕು ಖಚೇರಿಗಳಲ್ಲಿ ಮೇಲಧಿಕಾರಿಗಳ ಕೃಪಾದೃಷ್ಟಿಯಿಂದ ದರ್ಖಾಸು ಗುಮಾಸ್ತನಾಗಬಲ್ಲ ಭಾಗ್ಯವಂತನ ಹೊರತು ಮತ್ತೆಲ್ಲರೂ ಹೋಟೆಲು ಮಾಲಕರ ತೀರಲಾರದ ಸಾಲದ ಚಕ್ರದಲ್ಲೇ ತಿರುಗಣೆಯಂತೆ ತಿರುಗುತಿರ ಬೇಕು. ಇಂತಹ ನೌಕರಿಯು ಶ್ರೀಧರನ ನಿರುದ್ಯೋಗದ ಸಮಸ್ಯೆಯನ್ನು ಕೊನೆಗಾಣಿಸಿತೇ ಹೊರತು ಮತ್ತೇನನ್ನೂ ಸಾಧಿಸಿಕೊಡಲಿಲ್ಲ.

೧೯೩೩ ರಂದು ದಕ್ಷಿಣ ಕನ್ನಡ ಜಿಲ್ಲೆಯು ಸರ್ವೆಯು ಪುನರ್ವಿಮರ್ಶೆ ಯಾಗಬೇಕೆಂಬ ಸರಕಾರದ ಯೋಜನೆಯುದ್ಭವಿತ್ತು. ಆದರೆ ಜಿಲ್ಲೆಯು ಅದಕ್ಕೆ ಆಕ್ಷೇಪವಿತ್ತುದರಿಂದ ಅದರ ಸ್ಥಾನದಲ್ಲಿ ಹೊಸ ಸೆಟ್ಲುಮೆಂಟು ನಡೆಯ ಬೇಕೆಂಬ ಸಿದ್ಧಾಂತವಾಯಿತು. ಆ ಸಂದರ್ಭದಲ್ಲಿ ಒಬ್ಬೊಬ್ಬ ಕಮಿಶನರನ ಅಧೀನದಲ್ಲಿ ಸಿಬಂದಿಯು ತಾಲೋಕು ತಾಲೋಕುಗಳಲ್ಲಿ ಹೊಸ ಲೆಕ್ಕಗ ಳನ್ನು ತುಂಬತೊಡಗಿತು. ಶ್ರೀಧರಮೂರ್ತಿಗೂ ಅದರಲ್ಲಿ ಒಂದು ಸಂದರ್ಭವು ದೊರೆತು ಹೆಡ್‌ಕ್ಲಾರ್ಕನಾಗಿ ಈ ಊರಿಗೆ ಬಂದನು. ಶ್ರೀಧರನು ಸಾಹಸಿ-ಶ್ರಮಜೀವಿ, ಆದುದರಿಂದಲೇ ತನ್ನ ನಿಯುಕ್ತ ಜೀವನವನ್ನು ನಿಯಮಿತವಾಗಿ ನಡೆಸುತಿದ್ದನು. ಹೊರಗಿನ ಹಾಳು ಹರಟೆಗಳು ಅವನಿಗೆ ಸಲ್ಲವು. ಆಕಾ ರಣ ಈ ಊರಿಗೆ ಬಂದು ಒಂದು ವರ್ಷ ಕಳೆದಿದ್ದರೂ ಅವನು ಯಾರೊಡ ನೆಯೂ ಹೆಚ್ಚಿನ ಬಳಕೆಯನ್ನು ಇಟ್ಟುಕೊಂಡಿಲ್ಲ. ಅವನ ಉದ್ಯೋಗವೇ ಅವನ ಸಹಚಾರಿ. ಅವನು ಉದ್ಯೋಗದ ಅನುಚಾರಿ!

ಇಂತಹ ಕಟ್ಟು ನಿಟ್ಟುಗಳಿಂದಲೇ ಅವನ ಜೀವನವು ತೊಡಗಿದೆ. ಅಂತೆಯೇ ಮುಂದೆ ಸಾಗಿದೆ. ಅದಕ್ಕೆ ಸುಖದ ಸಲುಗೆಯು ಕಾವು ಕೂಡಿದು ದಿಲ್ಲ. ಪ್ರೀತಿಯು ನೀರಡಿಕೆಯಾದುದಿಲ್ಲ. ಆದರೆ ಆದಿನ ಸಂಜೆ ಅನನ್ಯಾಸಕ್ತ ವಾಗಿ ಅದಕ್ಕೆ ಒಂದು ಕಾವು ಕೂಡಿಹೋಯಿತು. ಅಂತಹ ಕಾವನ್ನು ಹೊಂದಿಸಿಕೊಳ್ಳಲು ಆ ಚೇತನವು ಸಿದ್ಧವಾಗಿಲ್ಲದಿದ್ದುದರಿಂದಲೇ ಅದರ ಬಿಸುಪು ಕಲ್ಪನೆಯ ಕಾವೇರಿಸಿ ಪ್ರೀತಿಯ ಬಾಗಿಲು ತೆರೆದು ಎದೆಯತ್ತ ಹಣ ಕಿತು. ತಣ್ಣಗಿನ ಹೃದಯಕ್ಕೆ ತಾಗಿದ ಕಾವು ಹೆಚ್ಚು ಪರಿಣಾಮಕಾರಿಯಾ ದುದರಿಂದಲೇ ಅವನು ನಿದ್ದೆಗೆಟ್ಟು ಹೊರಳಾಡಿದನು. ಅಂತಹ ಪರಿಸ್ಥಿತಿ

ಯಲ್ಲೂ ಮನಸ್ಸಿನಲ್ಲೇ ಸ್ವಲ್ಪ ಸಮಾಧಾನಗೊಂಡಿದ್ದನು. ಆ ಕೊಡೆ-ಅದು ಅವನ ಬಳಿಯುಳಿದಿಯಲ್ಲ! ಅದನ್ನು ನಾಳೆ ಸಂಜೆ ಹಿಂದೆ ಕೊಡಬೇಕಾಗಿ ದೆಯಲ್ಲ!

ಇಂತಹ ಮಧುರ ಕಲ್ಪನೆಗಳಲ್ಲಿ ಅವನಿಗೆ ತುಸು ಜೋಂಪಹರಿತು. ಆ ಜೋಂಪಿನಲ್ಲಿ ಅವನು ಕಂಡುದು ಸ್ವಪ್ನವೋ-ಮತಿ ಭ್ರಮೆಯೋ ಅಂತೂ ಅವನು ಆ ಕಸೂತಿಯ ಮೇನಕೆ ವಿಶ್ವಾಮಿತ್ರರನ್ನು ನೋಡುತ್ತ ನಿಂತಿದ್ದ. ನೋಡುತಿದ್ದಂತೆ ಅಲ್ಲಿ ಮೇನಕೆಯು ಮಾಸಿ ಅಂಬುಜಾಕ್ಷಿಯು ಮೇಲೆದ್ದು ಬಂದು ಕೈನೀಡಿ ಕೇಳಿದಳು—ಇಗೊಳ್ಳಿ-ನಿಮ್ಮ ಕೂಸು!-ಶ್ರೀಧರಮೂರ್ತಿ ಕೈತಡೆದು ಹೇಳಿದ—ಎಲ್ಲಿಯ ಮಗು? ಛೆ-ಬೇಡ ಬೇಡ! ಹೋಗಲಿ ಬಿಡು! ಎಂದು ಕೈಕೊಸರಿ ಕೊಂಡಾಗ ಅದು ಗೋಡೆಗೆ ಬಡಿದು ಎಚ್ಚರವಾಯಿತು. ಎಚ್ಚರವಾದಾಗ ಹೊತ್ತು ಮೂಡಿದ್ದು ಗಂಟೆ ಏಳುವರೆ ಹೊಡೆದಿದ್ದಿತು!

ಶ್ರೀಧರಮೂರ್ತಿಯು ಆದಿನದ ಕೆಲಸಗಳು ಯಂತ್ರದಂತೆ ಸಾಗಿವೆ. ಕೆಲಸ ಸಾಗದ ಸಂದರ್ಭದಲ್ಲಿ ಗುಣುಗುಟ್ಟಿ ಹಾಡಿದುದಿದೆ. ಹಾಡಲಾಗದ ಸಂದರ್ಭದಲ್ಲಿ ಗಂಟೆ ನೋಡುತ್ತ ಕುಳಿತುದಿದೆ. ಆದರೆ ಗಂಟೆಯು ಮಾತ್ರ ಸಾಗಲೇಯಿಲ್ಲ!

ಗಂಟೆ ಆರು ಹೊಡೆಯುತಿಸುವಾಗ ಅವನ ಶಾಲು ಹೆಗಲಮೇಲಿದ್ದಿತು. ಕಾಲು ರಸ್ತೆಯ ಮೇಲಿದ್ದಿತು. ಯಾವುದೋ ಒಂದು ಪ್ರಚೋದಕ ಶಕ್ತಿ ಅವನ ಕಾಲು ಹಿಡಿದು ಆ ಕಡೆ ಸೆಳೆಯುತಿದ್ದಿತು. ಅದೇನು ದೈವಿಕವೋ- ಪೈಶಾಚವೋ ಯಾರು ಬಲ್ಲ?

ಆದಿನ ಮಳೆ ಬಂದಿದ್ದಿಲ್ಲ. ಅಂಬುಜಾಕ್ಷಿಯ ಕೊಡೆ ಹಿಡಿದುಕೊಂಡು ದಿಗ್ವಿಜಯಕ್ಕೆ ಹೊರಟ ಕುಸುಮನಾಯಕನಂತೆ ಆತ ಹೊರಟಿದ್ದ. ಅವನ ಬರವನ್ನೇ ಕಾದು ನಿಂತದ್ದಳು ಆ ರತಿದೇವಿ! ಅವನನ್ನು ದೂರದಲ್ಲೇ ಕಂಡು ನಸುನಗುತ್ತ ಒಳ ನಡೆದಳು ಆಕೆ. ಅವನು ಬಾಗಿಲು ಸೇರುವ ವೇಳೆ ವಿಶಾ ಲಾಕ್ಷಿ ತುಟಿಯ ಮೇಲೆ ಬೆರಳಿಟ್ಟು—ಅಕ್ಕ ಇಲ್ಲ!—ಎಂದಳು.

ಶ್ರೀಧರಮೂರ್ತಿ .ನಸುನಕ್ಕು—ಸುಳ್ಳಿ! ಅಕ್ಕನನ್ನು ಈಗ ತಾನೇ ನೋಡಿದೆನಲ್ಲ! ಅಬ್ಬಾ ಪೋರಿ!—ಎಂದನು.

ಅವಳು ಮುಖ ತಿರುಗಿಸಿ—ಹಾಗಾದರೆ ಇದ್ದಾಳೆ!—ಎಂದು ನಗುತ್ತಾ ಕುಪ್ಪಳಿಸುತ್ತಾ ಓಡಿ ಬಿಟ್ಟಳು.

ಅವಳ ತಾಯಿ ನಗುತ್ತಾ ಇದಿರು ಬಂದು—ಬನ್ನಿ, ನಮ್ಮ ಅಂಬು ಈಗ ತಾನೇ ನಿಮ್ಮ ನೆನಪು ಮಾಡಿದಳು—ಎಂದು ಹಿಂದೆ ತಿರುಗಿ ಅಂಬೂ! ಬಾರೆ. ಅವರ ಕೊಡೆ ತೆಗೆದುಕೋ! ಎಂದಳು.

ಅಂಬುಜ ಪಕ್ಕದ ಕೋಣೆಯಿಂದ ಮೆಲ್ಲ ಮೆಲ್ಲನೆ ಹೆಜ್ಜೆ ಹಾಕುತ್ತ ಬಂದು ನಸುನಗುತ್ತ ಅವನ ಕೈಯಿಂದ ಕೊಡೆ ತೆಗೆದುಕೊಂಡು ಆ ಕಡೆ ನಡೆದಳು. ಅಷ್ಟರಲ್ಲಿ ತಾಯಿ ಮತ್ತೊಮ್ಮೆ ಕರೆದು—ಆ ವೀಳ್ಯದೆಲೆ ಹರಿವಾಣ ಸರಿಮಾಡಿ ತಾರೇ!—ಎಂದಳು.

ಶ್ರೀಧರ ಸುತ್ತಲೂ ನೋಡಿದ. ಮೇಜಿನ ಮೇಲಿನ ಕಸೂತಿ ವಸ್ತ್ರ ಜೋರಿಯಾಗಿದ್ದಿತು. ಅವರ ಮೇಲೆ ತಾಯ ಕೂಡೆ ನಿಂತಿದ್ದ ಒಂದು ಜಿಂಕೆಯ ಮರಿಯ ಮೇಲೆ ನೆಗೆಯಲು ಒಂದು ಹುಲಿ ಹೊಂಚುತ್ತಿದ್ದಿತು. ಅದನ್ನು ಕಂಡು ಅವನು ತಲೆದೂಗಿ—ಇದು ಕೂಡಾ ಅವರ—

ಅವರ ಅಲ್ಲ—ಅವಳ ನಮ್ಮ ಅಂಬುಜನ ಕೆಲಸ—ಎಂದು ಮಾತು ತಿದ್ದಿದಳು. ಮತ್ತೆ—ನೋಡಿ! ನಮ್ಮ ಅಂಬುಗೆ ಹದಿನೆಂಟು ಪೂರ್ತಿಯಾಯಿತಷ್ಟೆ. ನಿಮಗಿಂತ ಎಷ್ಟೋ ಚಿಕ್ಕವಳು. ಮತ್ತೆ ನೀವು ಅವರುಗಿವರೂಂತ ಹೇಳಿದರೆ—

ಹೆಚ್ಚು ಬಳಕೆಯಿಲ್ಲದ್ದರಿಂದ ಹಾಗೆ ಮಾತು ಬಂದು ಬಿಡುತ್ತದೆ.

ಬಳಕೆಯೇನು? ಮನುಷ್ಯನಿಗೆ ಮನುಷ್ಯ ಹಿತನಾದರೆ ಎಲ್ಲವೂ ಬಳಕೆಯಾಗುತ್ತದೆ. ನಿನ್ನೆ ಹೊತ್ತಿಗೆ ನಾವು ನಿಮ್ಮನ್ನು ಕಾಣುತ್ತೇವೆಂತ ಸ್ವಪ್ನದಲ್ಲೂ ಎಣಿಸಿದ್ದಿಲ್ಲ. ಆದರೆ ಆ ಮಳೆಯ ಉಪಕಾರದಿಂದಾಗಿ ನಿಮ್ಮನು ತಿಳಿದುಕೊಳ್ಳುವ ಭಾಗ್ಯ ಬಂತು!

ಈ ಮಾತು ಇಬ್ಬರಿಗೂ ಸಮ ತಾನೆ? ಎಂದನು ಶ್ರೀಧರಮೂರ್ತಿ.

ನಿಮಗೇನು ಮಹಾ! ನೀವೆಲ್ಲಿ ನಾವೆಲ್ಲಿ!

ಅದೇನಮ್ಮ ಹಾಗೆ? ಪರಸ್ಪರ ಪರಿಚಯದಲ್ಲಿ ಚಿಕ್ಕ ದೊಡ್ಡವರ ವ್ಯತ್ಯಾಸವೇನು? ಮನಸ್ಸು ಮೆಚ್ಚುವ ತನಕ ಮಾತ್ರ ಆತ್ಮವು ದೂರದೂರ ಇರುತ್ತದೆ. ಮೆಚ್ಚಿನ ಮೇಲೆ ದೂರವಿದ್ದು ಹತ್ತಿರವಾಗುತ್ತದೆ.

ಸಹಜ. ನಮ್ಮ ಅಂಬುಜನೂ ಈತನಕವೂ ನಿಮ್ಮ ವಿಚಾರವನ್ನೇ ಹತ್ತು ಸಲ ಹೇಳುತಿದ್ದಳು. ಅವಳು ನೋಡಿ—ಹಾಗೆಲ್ಲಾ ಯಾರನ್ನೂ ಯೋಚಿಸುವವಳೇ ಅಲ್ಲ. ಅವಳ ಶಾಲಾ ಮೇಸ್ತ್ರು ಯಾವಾಗಲೂ ಹೇಳು ತಿದ್ದರು—ಅಂಬುಜ ಹೊಸ ಮಾದರಿಗೆ ಬರುವಾಗ ಕಲಿಯುಗ ಕಳೀತವೊ ಏನೋ—ಎಂತ!

ಶ್ರೀಧರಮೂರ್ತಿ ಈ ಮಾತಿನಿಂದಾಗಿ ಸ್ವಲ್ಪ ಉಬ್ಬಿದ. ತನ್ನ ಸ್ಥಿತಿಯೇ ಅವಳಿಗೂ ಆಗಿದೆಯಲ್ಲ ಎಂಬ ನೆನವರಿಕೆಯಿಂದ ಅವನ ಮನಸ್ಸು ಸ್ನಿಗ್ಧವಾಯಿತು. ಇಂತಹ ಮಧುರ ಕಲ್ಪನೆಯಿಂದ ಅವನು ತುಸು ವ್ಯತ್ಯಸ್ಥನಾಗಿ ಕ್ರೋಪಿನ ಜೈತಲೆ ಸವರಿಕೊಂಡನು.

ಪ್ರೀತಿಯ ಎಣಿಕೆಯು ಎಂದಿಗೂ ಮಧುರವಾಗಿದೆ. ಅದು ಹೂವಿನೆಡೆಗೆ ತುಂಬಿಯಂತೆ ಬಂದು ಬಾಸಣಿಸಿ ತನ್ನ ಮನಸ್ಸಿನ ದನಿಗೂಡಿಸುವುದು. ಆಗ ಆ ಹೂವು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಬಾಯ್ದೆರೆದು ತತ್ತರಿಸುವುದು. ತುಂಬಿಯು ಹೂವಿನೊಡನೆ ಕೂಡಿದಾಗ ಅದು ಪರಸ್ಪರ ಸೌಹಾರ್ದದ ವಿನಿಮಯ—ಹೃದಯದಪರಿವರ್ತನೆ!

ಶ್ರೀಧರಮೂರ್ತಿ ಏನೂ ಹೇಳಲು ತೋಚದೆ ತುಸು ತಡವರಿಸಿದನು. ಕೊನೆಗೆ ತನ್ನ ದೌರ್ಬಲ್ಯವನ್ನು ಮರೆಮಾಸುವುದಕ್ಕಾಗಿ ಕೇಳಿದ—ಅವರ ಯಜಮಾನರು ಬರುತ್ತಾ ಬಹಳ ಹೊತ್ತಾಗುತ್ತದೋ ಏನೋ—

ಈ ಪ್ರಶ್ನೆಯಿಂದ ಅವಳ ಮುಖವು ಸ್ವಲ್ಪ ಕಪ್ಪಿಟ್ಟಿತು. ಎಲೆಹರಿವಾಣ ಹಿಡಿದು ಬಾಗಿಲ ತನಕ ಬಂದಿದ್ದ ಅಂಬುಜಳು ಒಮ್ಮೆ ಚಕಿತಳಾಗಿ ಅಂತೆಯೇ ಬಾಗಿಲ ಪಕ್ಕಕ್ಕೆ ಸರಿದಳು. ಇದನ್ನು ಕಂಡು ಶ್ರೀಧರನು ಏನೋ ತಪ್ಪು ಮಾಡಿ ತಿದ್ದಿಕೊಳ್ಳಲೆತ್ನಿಸಿದ ಶಾಲೆಯ ಹುಡುಗನಂತೆ ಕಕ್ಕಾಬಿಕ್ಕಿಯಾಗಿ ಸುತ್ತಲೂ ನೋಡಿದನು. ಈ ಪ್ರಶ್ನೆಯನ್ನು ಕೇಳಬಾರದಿತ್ತೋ

ಏನೋ! ಇದರಿಂದಾಗಿ ಅವರ ಮನಸ್ಸು ಏನೋ ಕಾರಣವಾಗಿ ನೊಂದುಕೊಂಡಿತೋ ಏನೋ!—ಎಂದು ತರ್ಕಿಸಿಕೊಂಡನು.

ಅವಳು ತನ್ನ ಮಾನಸಿಕ ಪರಿವರ್ತನೆಯನ್ನು ಹೊರಗಾಣಿಸದೆ ಮೆಲ್ಲನೆ ಹೇಳಿದಳು—ಇಲ್ಲ. ನಮ್ಮ ಅಂಬುಜನಿಗೆ ಇನ್ನೂ ಮದುವೆಯಾಗಿಲ್ಲ!—

ಶ್ರೀಧರನೊಮ್ಮೆ ಪಾತಾಳದಿಂದ ಮೇಲೆದ್ದು ಬಂದವನಂತೆ ಉಸಿರ್ಗರೆದು ಪಾರಾದೆನೆಂದು ಎಣಿಸಿಕೊಂಡನು. ಮತ್ತೆ ಧೈರ್ಯಗೊಂಡು ಕೇಳಿದನು—ಅದೇನು? ಅವಳ ಮೇಲೆ ನಿಮಗೆ ತುಂಬಾ ಮಮತೆಯಾದ್ದರಿಂದ ಅವಳನ್ನು ಹೊರಕಳುಹಿಸಲು ಬೇಸರ ಪಡುತ್ತೀರೋ ಏನೋ—!

ಹಾಗೇನೂ ಇಲ್ಲ. ಆದರೆ ನೋಡಿ! ನಮ್ಮ ಅಂಬುಗೆ ಎಂತಹ ಹುಡುಗ ಬರಬೇಕೆಂಬುದನ್ನು ನೀವೇ ಎಣಿಸಬೇಕು. ಅಂತಹ ಹುಡುಗ ನಮ್ಮ ದುರ್ಭಾಗ್ಯದಿಂದ ಬರದಿದ್ದರೆ ನಾವೇನು ಮಾಡಬೇಕು ಹೇಳಿ?

ಶ್ರೀಧರನಿಗೆ ಆ ಮಾತು ಅಹುದೆಂದೆನಿಸಿತು. ಎಲ್ಲರೂ ವಿದ್ಯಾವಂತರು ರೂಪವಂತರಾಗುವಂತಿಲ್ಲ. ಅದಕ್ಕೆ ಪುಣ್ಯಬೇಕು. ಆದರೆ ಅಂತಹ ಪುಣ್ಯವಂತರೆಲ್ಲ ಸಕಾಲದಲ್ಲಿ ಒಳ್ಳೆ ಜಾಗಸೇರುವರೆಂದು ಹೇಳಲು ಬರುವಂತಿಲ್ಲ. ಅದಕ್ಕೆ ಬೇರೆ ಭಾಗ್ಯ ಬೇಕು. ಇಂತಹ ಪುಣ್ಯ-ಭಾಗ್ಯಗಳನ್ನು ಎಲ್ಲಿಂದ ಹುಡುಕಿ ತರಬೇಕೆಂಬುದೇ ಪ್ರಶ್ನೆ!

ಈ ಪ್ರಶ್ನೆಗೆ ಉತ್ತರವಿಲ್ಲವಾದರೂ ಅವನು ಇಂತಹ ಹೆಣ್ಣಿಗೂ ಅನುಕೂಲದಾಂಪತ್ಯವೊದಗಲಿಲ್ಲವಲ್ಲವೆಂದು ಆಶ್ಚರ್ಯಗೊಂಡ. ಒಂದಿಗೆ ತಾನೂ ಅವಿವಾಹಿತನಾಗಿ ಉಳಿದಿರುವೆನಲ್ಲ—ಎಂದು ಸಮಾಧಾನ ತಂದುಕೊಂಡನು. ಇಂತಹ ವ್ಯಾಮೋಹದ ಪ್ರಣಾಲಿಯಲ್ಲಿದ್ದಾಗ ಅಂಬುಜಳು ವೀಳ್ಯದೆಲೆಯ ಹರಿವಾಣವನ್ನು ಹಿಡಿದುಕೊಂಡು ಬಂದಳು. ಆ ಮದುವೆಯ ಪ್ರಕರಣದ ಮಾತುಕತೆಯಿಂದಾಗಿ ಅವಳ ಕೆನ್ನೆ ತುಸು ಕೆಂಪೇರಿದ್ದಿತು. ಕಣ್ಣು ನಾಚಿದ್ದಿತು. ಹರಿವಾಣವನ್ನು ಮುಂದೆಯಿಟ್ಟು ತಾನು ತಾಯ ಹಿಂದೆ ಹೋಗಿ ನಿಂತಳು.

ತಾಯಿ ಅವಳ ಕೈಹಿಡಿದು ಕುಳ್ಳಿರಿಸಿ—ಏನೇ? ಹೀಗೂ ನಾಚಿಕೆ! ಹೀಗೆ ಎಲ್ಲರನ್ನೂ ಪರಕೀಯರೆಂದೇ ಭಾವಿಸಿದರೆ ಪ್ರಪಂಚ ನಡೆದೀತೇನೇ?—ಎಂದು ನಸುನಕ್ಕಳು.

ಆ ನಗೆಯ ಮಾತು ಶ್ರೀಧರನ ಹೃದಯ ಸ್ಪರ್ಶಿಯಾಯಿತು. ಅಂತಹ ಮಮತೆಯ ಮಾಧುರ್ಯದ ನೋಟದಿಂದ ಒಮ್ಮೆ ಅವಳ ಕಡೆ ನೋಡಿದನು. ನೋಡಿದಾಗ ಇಬ್ಬರ ಕಣ್ಣುಗಳೂ ಕೂಡಿದುವು. ಇವನ್ನರಿತೋ ಏನೋ ತಾಯಿಯು ಈಗ ಬಂದೆ. ಹಾಲು ಕೆಳಗಿರಿಸಿ ಬರುತ್ತೇನೆ—ಎಂದು ಒಳ ನಡೆದಳು.

ಶ್ರೀಧರನಿಗೆ ಬೆಂಕಿಯ ಬಳಿ ಕುಳಿತಿದ್ದಂತೆ ಮೈಯುರಿಯತೊಡಗಿತು. ಮನಸ್ಸೊಪ್ಪಿದ ಪ್ರಿಯದ ಹೆಣ್ಣಿನ ಬಳಿ ಏಕಾಂತದಲ್ಲಿ ಕುಳಿತು ಏನೆಲ್ಲಾ ಮಾಡಬೇಕೆಂದು ಕನವರಿಸುತಿದ್ದನೋ ಅದಾವುದನ್ನೂ ಅವನು ಆಗ ಎಣಿಸಲೂ ಸಮರ್ಥನಿದ್ದಿಲ್ಲ. ಆಕೆಯೂ ಕೆಲವು ತಡವೆ ನೆಲವನ್ನು ಉಗುರಿನಿಂದ ಕೀರುತ್ತ, ಕೆಲವೊಮ್ಮೆ ಸೆರಗಿನ ತುದಿ ಸುತ್ತುತ್ತ ಕಾಲಕ್ಷೇಪ ಮಾಡಿದಳು. ಅಂತೂ ಹತ್ತು ನಿಮಿಷಗಳ ಮೇಲೆ ತಾಯಿಯು ಪುನಃ ಬಂದಾಗ ಅವರವರು ಹೇಗೋ ಹಾಗೇನೇ ಯಥಾಸ್ಥಿತಿಯಾಗಿ ಕುಳಿತಿದ್ದರು!

ಈ ಸನ್ನಿವೇಶವನ್ನು ಕಂಡು ತಾಯಿಗೆ ನಗೆಬಂದಿತು. ಆ ನಗೆಯನ್ನು ಸೆರಗು ಹಿಡಿದು ತಡೆದು ಮಗಳೊಡನೆ—ಏನೇ–ತಾಂಬೂಲ ಕೊಟ್ಟೆಯೇನೇ? ಎಂದಳು.

ಮಗಳು ನಾಚುಗೆಯಿಂದ ಅಲ್ಲಿಂದೆದ್ದು ಓಡಿ ಬಿಟ್ಟಳು. ಮತ್ತೆ ಗಂಟೆ ಏಳು ಹೊಡೆದಾಗ ಶ್ರೀಧರನು—ನಾನಿನ್ನು ಬರಲೆ?–ಎಂದು ಎದ್ದುನಿಂತನು.

ಆದೀತು. ನಿಮಗೂ ಹೊತ್ತಾಯಿತು. ಬನ್ನಿ! ಸಮಯವಿದ್ದಾಗ ಈ ಕಡೆ ಬರುತ್ತಾಯಿರಿ. ಮರೆತು ಬಿಡಬೇಡಿ—ಎಂದಳಾಕೆ.

ಶ್ರೀಧರನಿಗೆ ಅಷ್ಟೆಲ್ಲಾ ಆಮಂತ್ರಣದ ಅಗತ್ಯವಿರಲಿಲ್ಲ. ಅವನು ಹೇಳದೆಕೇಳದೇನೇ ಬರುವ ಸ್ಥಿತಿಯಲ್ಲಿದ್ದನು. ಆದರೂ ಒಪ್ಪಿಕೊಂಡವನಂತೆ–ಆಗಬಹುದಲ್ಲ. ಅದಕ್ಕೇನು? ಎಂದು ಒಮ್ಮೆ ಸುತ್ತಲೂ ನೋಡಿ ಹೊರಬಿದ್ದನು.

ಶ್ರೀಧರಮೂರ್ತಿಯು ಆ ದಿನದ ರಾತ್ರಿಯಲ್ಲೂ ಹಲವು ಹಸ್ನಿರದ ಸುಖ ಸ್ವಪ್ನಗಳನ್ನು ಕಂಡಿರುವನು. ಕಲ್ಪನೆಯ ಸೌಂದರ್ಯ ಕೈವಲ್ಯದಲ್ಲಿರಲಾರದು. ಕೈವಲ್ಯವು ಕಲ್ಪನೆಯ ಅನಂತವಾದ ಸೂಲಿಳಿಗಳಿಂದ ಪರಿಷ್ಕೃತವಾದ ಪರಮಾವಧಿ. ಅಂತಹ ಬಲೆಯ ವಿಸ್ತರಣವೇ ಮನೋಹರವಲ್ಲದೆ ಜೇಡನ ಕಾರಸ್ಥಾನವಾದ ಅದರ ಕೇಂದ್ರವಲ್ಲ. ಅಂತಹ ಕಲ್ಪನೆಗಳಲ್ಲಿ ತೂಗಿ ಶ್ರೀಧರನು ಉಯ್ಯಾಲಾಡುತ್ತಿದ್ದನು. ಆದರೆ ಇಂದು ಅವನ ಆತ್ಮದಲ್ಲಿ ನಿನ್ನೆಯ ಕುದಿಯಿಲ್ಲ. ನಿಶ್ವಾಸವು ತೆಳುವಾಗಿ ತೇಲಿದೆ. ಎದೆಯು ಮೃದುವಾಗಿ ಮಾರ್ದನಿಗೊಟ್ಟಿದೆ. ಮನಸ್ಸು ಮಂಜುಳವಾಗಿ ಸೀತಿಗೊಳಿಸಿದೆ. ವೀಣೆಯ ಬಿಗಿದ ತಂತಿಯ ಮೇಲೆ ಬಯಕೆಯ ಬೆರಳಿಟ್ಟು ಹೃದಯವು ಹಮ್ಮೈಸಿದಂತೆ ಶ್ರೀಧರಮೂರ್ತಿಯ ಕಾಮಿತವು ಕರಣಕರಣಗಳಲ್ಲಿ ನಿಲುಕಿ ನಿಲುಕಿ ನಲಿದಾಡಿದೆ. ಆ ಒಂದು ಮಾತು—ನಮ್ಮ ಅಂಬುಜನಿಗೆ ಇನ್ನೂ ಮದುವೆಯಾಗಿಲ್ಲ—ಎಂಬೊಂದು ಮಾತು, ಸಂದೇಹ—ಆಶ್ಚರ್ಯ—ಸಂತೋಷ ಈ ಎಲ್ಲಾ ಕೋನಗಳಿಂದ ಅವನ ಹೃದಯವತ್ತ ಹಣಕಿ ಗುಣುಗುಣುಗಿದೆ. ಅದು ಹೂವಿನೆದೆಗೆ ಬಂದ ಪ್ರಭಾತದ ಪ್ರಥಮ ಕಿರಣದಂತೆ, ಬೇಸಗೆಯ ಕೊನೆಯ ದಿನ ಕ್ಷೀಣನದಿಯ ಮಳಲತಡಿಯ ಮೇಲೆ ಸುರಿದ ಮುಂಗಾರಿನ ಮೊದಲ ಹನಿಯಂತೆ ಆಶೆ ನಿರಾಶೆಗಳಿಗೆ ಸೇತು ಬಿಗಿದಿದೆ. ಆ ಸೇತುವಿನ ಮೇಲೆ ಮುನ್ನಡೆದು ಸಿದ್ಧಿಯ ಕೊನೆ ಸೇರಬಯಸುವುದು ಜೀವನಕ್ಕೆ ಸಹಜವಾದ ಗುರಿ. ಅಂತಹ ಗುರಿಯು ಬಹಳ ಮುಂದಿಲ್ಲವೆಂದೇ ಶ್ರೀಧರನು ಭಾವಿಸುತ್ತ ಭಾವಿಸುತ್ತ ಸುಖನಿದ್ರೆಯನ್ನು ಮಾಡಿದನು.

ಮುಂಜಾನೆ ಎದ್ದಾಗ ಅವನ ಮನೋಭಾವನೆಯು ಒಂದು ಸ್ತಿಮಿತಕ್ಕೆ ಬಂದಿದ್ದಿತು. ಅಂತಹ ಸ್ತಿಮಿತದ ಸೀಮೆಯ ವಿಚಾರ ದೃಷ್ಟಿಯಿಂದ ಅವನು ತನ್ನನ್ನೇ ಕೇಳಿ ಕೊಂಡನು — ಆ ಹೆಣ್ಣು ಯಾವ ಜಾತಿಯೋ— ನೀತಿಯೋ? ತನಗೂ ಅವಳಿಗೂ ಎಲ್ಲಿಯ ಸಂಬಂಧವೋ? ಇಂತಹ ಹಲವಾರು ಸಮಾಜದ ಹಗಿತಗಳನ್ನು ಬಿಡಿಸಿಕೊಂಡು ಬಾಳಲು ಸಾಧ್ಯವಿದೆಯೋ? ಎಂಬ ತರ್ಕದೊಂದಿಗೆ ಪರ್ಯಾಯಲಿ! ಮನಸ್ಸು ಮೆಚ್ಚಿದ್ದು ಮಹಾದೇವನಿಗೆ ಪ್ರೀತಿ, ಆದುದರಿಂದ ಈ ಸಂದರ್ಭವೆಲ್ಲಾ ಸುಕರವಾಗಿಯೇ ಕೂಡಿಬರಬಹುದು. ಅಲ್ಲದೆ ಹೋದರೂ ಪರಸ್ಪರ ಪ್ರೀತಿಯ ಸಂಘಟನೆಯಲ್ಲಿ ಜಾತಿ ಕುಲಗಳ ಕಳಂಕವಿರಲಾಗದು. ಜೀವನದಲ್ಲಿ ಮಹತ್ವಾದುದು ಜಾತಿಯಲ್ಲ. ಅದರ ಮೌಲ್ಯ ಆದರ್ಶ! ಜೀವನವು ಜಾತಿಗಾಗಿ ಹೋರಾಡಬೇಕಾಗಿಲ್ಲ — ಆದರ್ಶಕ್ಕಾಗಿ ಮಾತ್ರ! ಎಂದು ತನ್ನಲ್ಲೇ ತಾನು ಗುಣಾಕಾರ ಹಾಕುತ್ತಿದ್ದನು.

ಆದರೆ ಮನುಷ್ಯನು ಇಂತಹ ಉದಾತ್ತ ವಿಚಾರಗಳಿಂದಲೇ ತೃಪ್ತನಾಗುವುದಿಲ್ಲ. ಕುತೂಹಲವು ಎಂದೆಂದಿಗೂ ಅಂತಹ ವಿಚಾರಗಳನ್ನು ಕೆದರಿಸುವುದು. ಮನಸ್ಸು ನಿರ್ಧಾರದ ಕಡೆ ಸಾಗಿದಂತೆಲ್ಲ ತಿಳಿಯಬೇಕೆಂಬ ವಿಮರ್ಶಾತ್ಮಕ ಬುದ್ಧಿಯು ಊರ್ಜಿತವಾಗುವುದು. ಹತ್ತು ಜನರ ಮನಸ್ಸಿನ ಮೇಲೆ ಅದನ್ನು ಆಪಾತತಃ ಪ್ರತಿಬಿಂಬಿಸಿ ಅದರ ಪರಿಣಾಮವನ್ನು ತಿಳಿಯಬೇಕೆಂಬ ಬಯಕೆ ಬಲವತ್ತರವಾಗುವುದು. ಆದರೆ ಶ್ರೀಧರಮೂರ್ತಿಯು ಈ ವಿಚಾರವನ್ನು ಇನ್ನೊಬ್ಬರೊಡನೆ ಹೇಗೆ ಕೇಳಬೇಕೆಂಬುದನ್ನು ತಿಳಿಯದೆ ಸೋತು ಹೋದ. ಕಾರಣ ಅವನು ಮೊದಲಿನಿಂದಲೂ ತನ್ನ ಸಂಸಾರವನ್ನು ಬಿಟ್ಟೇ ಬಾಳಿಬಂದ ಹುಡುಗ. ಅಕ್ಕತಂಗಿಯಂದಿರೊಡನೆ ಕೂಡಿ ಮದುವೆ ಮೋಜುಗಳ ಕುರಿತು ಮಾತುಕತೆ ಬೆಳೆಸಿ ಬದುಕಿದವನಲ್ಲ. ಆದುದರಿಂದ ಅವನಿಗೆ ಇಂತಹ ಸನ್ನಿವೇಶವು ತೀರಾ ಹೊಸತು. ಆದರೂ ಸಾಹಸ ಮಾಡಿ ಆ ದಿನ ಬೆಳಿಗ್ಗೆ ಹೋಟೆಲಿನ ಪಕ್ಕದ ರೂಮಿನಲ್ಲಿ ಯಾರದೋ ಮದುವೆಯ ಪ್ರಸ್ತಾವವು ಬಂದಾಗ ತಾನೂ ಬಾಯಿ ಹಾಕಿ ತನ್ನ ಮನಸ್ಸಿನ ಆದರ್ಶದ ಮಾದರಿಯನ್ನು ಹೊರಗೆಡಹಿದನು. ಆದರೆ ಅದಕ್ಕೆ ಅಲ್ಲಿ ಅವನೆಣಿಸಿದಂತೆ ಸುಸ್ವಾಗತವು ದೊರೆಯಲಿಲ್ಲ. ಎಲ್ಲರೂ ಅದಕ್ಕೆ ಅಪಾರ್ಥವನ್ನೇ ಕಟ್ಟಿ

ಕೊಂಡರು. ಆ ವಾದ ಭೂಮಿಯಿಂದ ಸಸೂತ್ರವಾಗಿ ಪಾರಾಗಿ ಬರಬೇಕಾದರೆ ಅವನು ಇಷ್ಟನ್ನು ಒಪ್ಪಿಕೊಳ್ಳಲೇ ಬೇಕಾಯಿತು—ಮದುವೆಯು ಮಾನಸಿಕ ತೃಪ್ತಿಯ ಮೇಲೆ ಮಾತ್ರವಲ್ಲ ನೈತಿಕ ಬೆಂಬಲದ ಮೇಲೂ ನಿರ್ಭರವಾಗಿದೆ. ಮದುವೆಯಿಂದ ಎರಡು ಜೀವಗಳು ತಮ್ಮ ಸುಂದರ ಸಾಹಚರ್ಯದ ಸ್ವಪ್ನಗಳನ್ನು ಆವಿಷ್ಕರಿಸುವುದು ಎಂತು ಸಮಂಜಸವೊ ಅಂತೆಯೇ ಆ ಸೌಂದರ್ಯವನ್ನು ತಮಗಾಗಿ ಮಾತ್ರವಲ್ಲ ತಮ್ಮ ಸಂತಾನದ ಹಿತಕ್ಕಾಗಿ ಪರಿಷ್ಕರಿಸುವುದೂ ಅಗತ್ಯವಾಗಿದೆ. ಮುಂದಿನ ವಂಶವು ತನ್ನ ಹಿರಿಯರಿಗಾಗಿ ನಾಚಿ ತಲೆತಗ್ಗಿಸುವ ಯಾವ ಸಂದರ್ಭವೂ ಸಮಾಜದ ಭದ್ರತೆಯ ದೃಷ್ಟಿಯಿಂದ ಪರಿಹಾರ್ಯವಾಗಿದೆ. ವಿವಾಹವು ಪ್ರಾಚೀನ ಯಜ್ಞ ಮಾತ್ರವಲ್ಲ—ಒಂದು ಶಾಶ್ವತ ಯೋಜನೆ!

ಆದಿನ ಭಾನುವಾರ. [illegible]ೀಸು ರಜೆಯಿದ್ದುದರಿಂದ ಶ್ರೀಧರಮೂರ್ತಿಯು ರೂಮಿನಲ್ಲೇ ಕಾಲಹ[illegible]ಣ ಮಾಡುತಿದ್ದನು. ಅಥವಾ ಅಂಬುಜಳ ನೆನಪಿನಿಂದ ಕಾಲದ ಸದುಪಯೋಗವನ್ನು ಮಾಡುತಿದ್ದನು. ಅವನ ಪಕ್ಕದ ಕೋಣೆಯನ್ನು ಒಬ್ಬ ಇನ್ಸೂರೆನ್ಸ್ ಏಜಂಟನು ವಾಸ್ತವ್ಯ ಹಿಡಿದಿದ್ದನು. ಅದುದರಿಂದಲೇ ಇವನಿಗೆ ಆತನೊಡನೆ ತುಂಬಾ ಬಳಕೆಯಿದ್ದಿತ್ತು. ಅವನಿಂದ ಹೇಗಾದರೂ ಅಂಬುಜನವರ ವಿಚಾರವನ್ನು ಹೆಚ್ಚಾಗಿ ತಿಳಿದುಕೊಳ್ಳಬೇಕೆಂದು ಎಣಿಸಿದನು. ಲೋಕಪರಿಚಯಕ್ಕೆ, ಲೋಕಾಭಿರಾಮಕ್ಕೆ ಒಬ್ಬ ವಿಮಾ ಏಜಂಟನನ್ನು ಬಿಟ್ಟು ಮತ್ತಾರು ಸಮರ್ಥರು? ಡಾರ್ವಿನ್ ತತ್ವ ಪ್ರತಿಪಾದನೆಯಾದಂದಿನಿಂದ ವಿಮಾ ಏಜಂಟನು ತನ್ನ ಕ್ಷೇತ್ರವು ಸುವಿಶಾಲವಾಯಿತಲ್ಲ-ಎಂದು ಹರ್ಷೋದ್ಗಾರವೆತ್ತಿರುವನು! ಅಂತಹ ಒಂದು ಸಂದರ್ಭವು ಕಾನೂನುಬದ್ಧವಾಗಿ ದೊರೆಯಿತೆಂದರೆ ಆತ ಮನುಷ್ಯರನ್ನು ಬಿಡಿ—ಎಲ್ಲಾ ಮಂಗಗಳ ಕೈ ಕುಲುಕಿ ಸಂಪೂರ್ಣ ಪರಿಚಯಕ್ಕೂ ಸದಾ ಸಿದ್ಧನೆ!

ಶ್ರೀಧರನು ಕಟ್ಟಕಡೆಗೆ ಅವನ ಶರಣು ಹೋದನು. ಏನೋ ಪ್ರಸ್ತಾವವೆತ್ತಿ ಏನೂ ಸಂಬಂಧವಿಲ್ಲದವನಂತೆ ನಿರಾಲವಾಗಿ ಕೇಳಿದನು—

ಏ- ಆ ಗಾಂಧಿ ರೋಡಿನಲ್ಲಿ ಒಂದು ಮಿಠಾಯಿ ಅಂಗಡಿಯಿದೆಯಲ್ಲ ಅದರ ಪಕ್ಕದ ಮನೆ ಯಾರದೋ ಮಾರಾಯ?

ಏಜಂಟ ಮಹಾಶಯನು ಸ್ವಲ್ಪ ಯೋಚಿಸಿ ಮತ್ತೆ ತಲೆದೂಗಿ ನಗ ತೊಡಗಿದ. ಆ ನಗೆಯಲ್ಲಿ ಏನೋ ಅರ್ಥವೊ ಅಪಾರ್ಥವೊ ಹುದುಗಿದ್ದಿತೆಂಬುದು ಶ್ರೀಧರನಿಗೆ ಮನದಟ್ಟಾಯಿತು. ಆದುದರಿಂದಲೇ ಅವನ ಮುಖವನ್ನೇ ನೋಡುತ್ತ ಕುಳಿತ.

ನಗೆ ಮುಗಿದ ಮೇಲೆ ಏಜಂಟನು ಕಣ್ಣು ಮಿಟುಕಿಸಿ ಕೇಳಿದನು-ಏಕೆ ಮಹಾರಾಯ! ಆ ಮನೆಯನ್ನು ಕೇಳಿದಿ?

ಮತ್ತೇನಿಲ್ಲ. ಮೊನ್ನೆ ಮೊನ್ನೆ ನೋಡು! ಆ ಮಾರ್ಗದಲ್ಲಿ ಹೋಗುತಿದ್ದಾಗ ತುಂಬಾ ಮಳೆ ಬರುತಿದ್ದಿತು.

ಎಂದರೆ—ಆ ಮನೆ ಹೊಕ್ಕಿಬಿಟ್ಟೆಯೇನು?

ಶ್ರೀಧರನಿಗೆ ಈ ವಿಚಾರದಲ್ಲಿ ಪ್ರ[illegible] ಸತ್ಯ ಹೇಳುವುದು ಅಷ್ಟೇನೂ ಹಿತವಲ್ಲ ಯಶಸ್ಸೂ ಅಲ್ಲವೆಂಬುದಂತೂ ಖಚಿತವಾಗಿ ಸ್ವಲ್ಪ ಬಾಯ್ತುಡೆದು ಹೇಳಿದನು.

ಹಾಗೇನೂ ಇಲ್ಲವಯ್ಯ! ಆದರೆ ಕೇಳು, ಅಲ್ಲಿ ಹೋಗುತ್ತಾ ಸ್ವಲ್ಪ ಒದ್ದೆ ಜಾಗದಲ್ಲಿ ಕಾಲುಜಾರಿ ಹೋಯಿತು.

ಒಳ್ಳೆ ಸಂದರ್ಭ. ನನಗೂ ಆಶೆಯಾಗುತ್ತದೆ!

ಮತ್ತೇನಿಲ್ಲ. ಹಾಗೆ ಕಾಲುಜಾರಿದಾಗ ಯಾರೋ ಒಬ್ಬಳು ಆ ಮನೇಲಿ ನಿಂತವಳು ನಗುತಿದ್ದಳು. ಅಷ್ಟಕ್ಕೆ ಕೇಳಿದೆ.

ನಗಬಹುದು. ಅದು ನಗುವ ಜಾತಿಯೆ!

ಎಂದರೆ?

ಎಂದರೆ-ಬೆಪ್ಪ! ಅದು ಸೂಳೇರ ಮನೆ, ಆ ಹುಡುಗಿ ತಾಯಿ ಸುಂದರಿ-ಸಿಲ್ಕು ಸುಂದರೀಂತ ಪ್ರಸಿದ್ಧಿಯುವಳು.

ಅಲ್ಲ. ನೋಡುವಾಗ ಸೂಳೇರ ಹುಡುಗಿಯ ಹಾಗೆ ಕಾಣಲಿಲ್ಲ.

ಅದು ಹೌದು. ಅವಳು ಮೊನ್ನೆ ತನಕ ಶಾಲೆಗೆ ಹೋಗುತ್ತಾಯಿದ್ದಳು. ಆದ್ದರಿಂದ ಸುಧಾರಣೆಹೊಂದಿದ್ದಾಳೆ. ಈಗ ಏನು? ಸೂಳೇರು ಸೂಳೇರ

ಹಾಗೆ ಕಾಣೋದೇಯಿಲ್ಲ. ಎಷ್ಟೋ ತಿದ್ದುಪಡಿಯಾಗಿದೆ. ಈಗೀಗ ಎಲ್ಲರೂ ಮದುವೆಯಾಗ್ತಾಯಿದ್ದಾರೆ.

ಶ್ರೀಧರಮೂರ್ತಿ ಆ ಮಾತು ಕತೆಗಳನ್ನು ಅಲ್ಲಿಂದಲ್ಲಿಗೇ ಬಿಟ್ಟು ಬಿಟ್ಟನು. ಇದರಿಂದಾಗಿ ಒಂದು ತ್ರಿಶೂಲವು ಎದೆತಿವಿದು ಅಸಹ್ಯವೇದನೆಯಾದಂತಾಯಿತು. ಈ ತನಕ ಅವನು ಕಂಡುಕೊಂಡ ಸ್ವಪ್ನಪ್ರಪಂಚವೆಲ್ಲಿ? ಈ ತನಕ ಕಂಡದು ಬೆಳಕಲ್ಲ—ಥಳಕು! ಮಾಯಾಮೃಗ!

ಆದರ್ಶವು ಅಭಿಲಾಷೆಯೊಂದಿಗೆ ಕುಸಿದು ಬೀಳುವಾಗ ಅನಂತಯಾತನೆಯಾಗುವುದು. ಹೆಜ್ಜೆ ಹೆಜ್ಜೆ ಮೇಲೆ ಧೃತಿಯಿರಿಸಿ ಮೇಲುನಿಚ್ಚಣಿಕೆಯೇರಿದ ಆತ್ಮವು ಅಂತಹ ಅಧಃಪಾತದ ನೋವನ್ನು ಸಹಿಸಲು ಸನ್ನದ್ಧವಾಗಿರುವುದಿಲ್ಲ. ಆದುದರಿಂದಲೇ ಆದರ್ಶವು ಬಿದ್ದ ಪೆಟ್ಟಿಗೆ ಗಾಜಿನಂತೆ ನುಚ್ಚುನೂರಾಗುವುದು.

ಶ್ರೀಧರಮೂರ್ತಿಯು ಒಂದು ಹೆಜ್ಜೆ ಮುಂದಿಟ್ಟಾಗಿದ್ದಿತು. ಇನ್ನು ಮುಂದಿನ ಮಾರ್ಗವೇನೆಂದು ಅವನ ಆತ್ಮ ಬುದ್ಧಿಯೊಡನೆ ಗುದ್ದಾಡುತಿದ್ದಿತು. ಅಂತಹ ಗುದ್ದಾಟದಲ್ಲಿ ಕೊಂಚ ಹೃದಯ ವಿಪ್ಲವವಾಗುವುದು, ವಿಚಾರಕ್ರಾಂತಿಯಾಗುವುದು. ಅಂತೆಯೇ ಅವನು ಒಂದು ಕಾಲಲ್ಲಿ ನಿಂತವನಂತೆ ಮುಂದೆ ನೋಡತೊಡಗಿದ. ಆಶೆಯಿಂದ ನಿರಾಶೆಯ ಕಡೆ ನೋಡತೊಡಗಿದ. ಉನ್ನತಿಯಿಂದ ಅವನತಿಯ ಕಡೆ ನೋಡತೊಡಗಿದ. ಕಡಲಕರೆಯಲ್ಲಿ ನಿಂತವನಿಗೆ ವೇಗವು ಕಾಲ್ಬುಡದ ತಳವನ್ನು ಕೊರೆದಿರುವಂತೆ ಪ್ರಪಂಚದ ಸ್ಥಾಯಿತ್ವವು ಅವನ ಕೈಯಿಂದ ನುಸುಳುತಿದ್ದಂತೆ ಭಾಸವಾಯಿತು. ವೇಗಕ್ಕೆ ಹಿಡಿತವಿಲ್ಲ. ವೇಗವನ್ನು ವೇಗವೇ ದಕ್ಕಿಸಿಕೊಳ್ಳಬಲ್ಲುದು. ಸಂದರ್ಭವು ಮುಂದೋಡಿದರೆ ಮನಸ್ಸೂ ಅದರೊಡನೆ ಧಾವಿಸಬೇಕು. ಧಾವಿಸಿ ಅದರ ಹಿತಾಹಿತಗಳ ರೂಪರೇಖೆಯನ್ನು ಬಿಡಿಸಿ ನೋಡಬೇಕು. ಇಂತಹ ನೋಟದಿಂದ ಅಂಬುಜಾಕ್ಷಿಯನ್ನು ಕಾಣತೊಡಗಿದನು.

ವಿವಾಹವು ನೈತಿಕ ಬೆಂಬಲದಿಂದ ರೂಪಗೊಂಡಿದೆ. ಆ ನೈತಿಕ ಬೆಂಬಲವು ವೈಯಕ್ತಿಕವೊ ಸಾಮೂಹಿಕವೊ? ಜಾತಿಪಂಥಗಳು ಪರಂಪರಾಗತಗಳೆಂಬ ಮಾತನ್ನು ಶ್ರೀಧರನು ಒಪ್ಪಲೊಲ್ಲನು. ಹಾಗಾದರೆ ಅಂಬುಜಳ ಮೇಲೆ ಅಂತಹ ಸ್ವಾಯತ್ತವಲ್ಲದ ಕಿಲ್ಬಿಷವು ಕೂಡಬಲ್ಲುದೆ? ಕೂಡ

ಲಿರುವುದಾದರೆ ಅದು ಯಾರ ಹೊಣೆಗಾರಿಕೆಯ ಮೇಲೆ? ಪಾಪದ ಸಂತಾನವು ಪಾಪದ ಹೊರತು ಪುಣ್ಯವಾಗಲಾರದೆ? ಪಾಪದ ಸಂತತಿಯು ಪಾಪವೇ ಆದರೆ ಅದಕ್ಕೆ ಪರಿಹಾರವಿದೆಯೇ? ಈ ಸಮಾಜದ ನಿರ್ಣಯ---ನಿರೋಧಗಳಿಗೆ ನಗಬೇಕೆ--ಅಳಬೇಕೆ? ನಕ್ಕರೆ ಪ್ರಪಂಚವು ಹುಚ್ಚೋ—ನಕ್ಕವರು ಹುಚ್ಚರೋ? ಅಳುವುದಾದರೆ ಅದರೊಡನೆ ಯಾರ ಸಹಾನುಭೂತಿಯಿದೆ? ಇವುಗಳನ್ನೆಲ್ಲಾ ಎಣಿಸಿ ಎಣಿಸಿ ಇಂತಹ ಸಾಂಪ್ರದಾಯಿಕ ಶಾರಣ್ಯದ ಮಟ್ಟದಿಂದ ಮೇಲೇರಬೇಕೆಂದು ಒಮ್ಮೆ ನಿರ್ಧರಿಸಿದನು. ಅವನೆಣಿಕೆಯಲ್ಲಿ ಇದು ಹೃದಯಪರಿವರ್ತನೆ. ಉನ್ನತಿಗೇರಲು ಬಯಸುವ ಪ್ರತಿಜೀವಕ್ಕೆ ವಾತಾವರಣವು ಅಡ್ಡಬರಲಾಗದು. ಅದನ್ನು ಗಾಳಿಯು ಮೇಲೂದಿ ಉನ್ನತಿಗೇರಿಸಬೇಕು. ಆದರೆ ಅಂತಹ ಜೀವಕ್ಕೆ ಬಂದ ಸದಭಿಲಾಷೆ ಸಹಜವೋ---ಕಪಟವೋ ಕಂಡವರಾರು?

ಯಾವ ಕೋನದಿಂದ ವಿಚಾರಗೊಂಡರೂ ಯಾವುದೂ ನಿರ್ಧಾರಕ್ಕೆ ಬರಲಿಲ್ಲ. ಅಂತೆಯೇ ಸಂಜೆ ಆ ಕಡೆ ಹೋಗಲಿಲ್ಲ. ಆ ರಾತ್ರಿ ನಿದ್ರೆಯೂ ಬರಲಿಲ್ಲ. ಈ ಪ್ರೇಮದ ನೆಲೆಗಟ್ಟಿನ ಕಲ್ಲು ಕಲ್ಲುಗಳನ್ನು ಕಿತ್ತು ನೋಡಬೇಕೆಂಬ ಹುಮ್ಮು ಆತ್ಮದಲ್ಲಿ ಕುದಿಯುತಿದ್ದಿತು. ಅಂತಹ ಕುದಿ ಕೊಂಚ ತಣಿದ ಮೇಲೆ ಕನಸಿನಲ್ಲೂ ಆ ಸಮಸ್ಯೆಯನ್ನೆ ಕಂಡಿರುವನು. ಏನನ್ನು? ಒಂದು ಉಪವನದಲ್ಲಿ ಬೆಳ್ದಿಂಗಳ ರಾತ್ರಿ ಅಮೃತಶಿಲೆಯ ಪುತ್ತಳಿಯ ಮುಂದೆ ಒಬ್ಬಳು ಸುಂದರಿ ಜನರ ಆಕರ್ಷಣೆಗಾಗಿ ಪದೇ ಪದೇ ಸೀರೆ ಬದಲಾಯಿಸುತ್ತ ಕುಣಿಯುತಿದ್ದಳು. ಯಾರವಳು? ಸುಂದರಿ-ಹಾಂ! ಸಿಲ್ಕುಸುಂದರಿ!

## ಎಸಳು ೪ — ಬಿಟ್ಟ ಬಾಣ.

ಏನು ಬಡೀತೇ ನಿನಗೆ? ಬುದ್ಧಿಯಿಲ್ಲದವಳು! ದಿನಾ ದಿನಾ ಸಂಜೆ ಬಾಗಿಲು ಕಾಯುತ್ತಾಯಿದ್ದಿಯಲ್ಲ? ಏನು ಪುರುಷಾರ್ಥ? ನಾನು ಹೇಳಿದರೆ ಮತ್ತೆ ನಿನಗೆ ಹೆಚ್ಚಾಗುತ್ತೆ. ಇಲ್ಲ—ಈಗಿನ ಹುಡುಗೇರನ್ನ ಶಾಲೆಗೆ ಕಳುಹಿಸೋದೇ ತಪ್ಪು. ಅದರ ಉಪಕಾರ ಇದೇ!—

ಅಂಬುಜಳು ಪಿಟ್ಟೆನ್ನಲಿಲ್ಲ. ಬಾಗಿಲು ಹಾಕಿಕೊಂಡು ಮೌನವಾಗಿ ಮಹಡಿಯೇರಿ ಪುಸ್ತಕ ತೆಗೆದುಕೊಂಡು ಓದತೊಡಗಿದಳು. ತಾಯಿ ಹೇಳಿದಂತೆ ಅವಳೇನು ಬುದ್ಧಿಯಿಲ್ಲದವಳಲ್ಲ. ಆದರೆ ಎಷ್ಟೋ ವೇಳೆ ಬುದ್ಧಿಮತ್ತರು ಸಂಸ್ಕಾರದ ಆವರಣದಿಂದಾಗಿ ಪ್ರಾಕೃತಿಕ ಶಕ್ತಿಯು ಕುದುರಿ ಹೋಗಿ ಕುಂಠಿತರಾಗುವುದಿದೆ. ಅದು ಅವಳ ತಪ್ಪಲ್ಲ. ಎಲ್ಲರ ತಪ್ಪು ಮಾರ್ಗ! ವಿದ್ಯೆಯು ಹೊಸ ಮನೋಧರ್ಮಗಳನ್ನು ಅಳವಡಿಸಿ ಸಮಾಜದ ಅವಿದ್ಯೆಯನ್ನು ಹೊರದಬ್ಬಿದೆ. ಹತ್ತು ವರ್ಷಗಳ ಹಿಂದೆ ನಿಂತ ಪೀಠದ ಮೇಲೆ ಇಂದಿನ ಜನಾಂಗವು ನಿಂತಿಲ್ಲ. ಅಂದಿನ ನೋಟ ನುಡಿ ನಡತೆಯು ಈ ಯುವಜನಾಂಗಕ್ಕೆ ಹಿತವಾಗಿಲ್ಲವಾದರೆ ಅವು ಬರೇ ಸುಧಾರಣೆಯಲ್ಲ—ಸತ್ಯದ ವಿಕಾಸ! ಇಂತಹ ವಿಕಾಸದ ಮಾರ್ಗದಲ್ಲಿ ಸೂಳೆಗೇನು ಸ್ಥಾನವಿದೆ? ಅಂತೆಯೇ ಅಂಬುಜಳು ಆ ಪದ್ಧತಿಯನ್ನು ಮೆಚ್ಚಲಿಲ್ಲ. ತಾಯಿಯ ಅನುನಯ ಅನುರೋಧಗಳು ಅವಳ ಮೇಲೆ ಪರಿಣಾಮಕಾರಿಯಾಗಲಿಲ್ಲ. ಆದುದರಿಂದಲೇ ಆ ಬಿಸುಪಿನ ಮನಸ್ಸಿಗೆ ಶ್ರೀಧರಮೂರ್ತಿಯ ಸೌಮ್ಯದರ್ಶನದಿಂದ ಅದೂ ಆಕಸ್ಮಿಕವಾದ ಆ ವಿಚಿತ್ರಸಮಾವೇಶದಿಂದ ತೃಪ್ತಿಯಾಯಿತು. ಅವಳೆಂದೂ ಪುರುಷಸಂಸರ್ಗಕ್ಕಾಗಿ ಹಾತೊರೆದಿಲ್ಲ. ಹಾಗೆ

ವಿಕಲಳಾಗಿದ್ದಿದ್ದರೆ ಅವನ್ನು ದೊರಕಿಸಿಕೊಳ್ಳುವುದರಲ್ಲಿ ಅವಳಿಗೇನೂ ಕಷ್ಟ ವಿರಲಿಲ್ಲ. ಅವಳ ಅಭಿಲಾಷೆಯು ಹುಚ್ಚುಕುದುರೆಯಾಗಿ ದೌಡಾಯಿಸಿ ರದೆ ಆದರ್ಶದ ಅಧೀನವಾಗಿದ್ದಿತು. ಒಮ್ಮೆಗೆ ಸುಪ್ತಪ್ರೇಮವು ಪ್ರಚೋದ ನೆಗೊಂಡರೆ ಮತ್ತದು ಎಂದಿಗೂ ಜಾಗ್ರತವಾಗಿಯೇ ಇರುವುದು. ಅಂತಹ ಜಾಗ್ರತಾವಸ್ಥೆಯಿಂದಲೇ ಅವಳ ಹೃದಯವು ಸುಖ—ಸಂಶಯಗಳಿಂದ ಕೂಡಿ ಅವನ ಬರವಿಗಾಗಿ ಬಾಗಿಲು ಕಾದಿದೆ. ಈ ನಾಲ್ಕು ದಿನಗಳಿಂದಲೂ ಕಾದೇಯಿದೆ. ಇದು ತಾಯದೃಷ್ಟಿಯಿಂದ ಪುರುಷಾರ್ಥವಿಲ್ಲದಿರಬಹುದು. ಒಬ್ಬ ಬಿ. ಎ. ಕಲಿತ ಸಾಮಾನ್ಯ ನೌಕರನನ್ನು ತನ್ನ ಮಗಳ ಭವಿಷ್ಯದ ಭವಿತವ್ಯದೊಡನೆ ಕೂಡಿಸುವುದರಲ್ಲಿ ಅವಳೇನೂ ಹೆಚ್ಚಿನ ಪುರುಷಾರ್ಥ ವನ್ನು ಕಾಣದಿರಬಹುದು. ಅದು ಅವಳ ನೋಟ. ಆ ನೋಟಕ್ಕೆ ಶ್ರೀಮಂತಿಕೆ—ಠೀವಿ ಆಡಂಬರಗಳನ್ನೇ ಕಂಡು ಅಭ್ಯಾಸ. ಆದುದರಿಂದ ನೋಟು ಸುಡುವ ಶಂಟು ಸುರಿಯುವ ವಿಟವಿಲಾಸಿಗಳ ಸಂಪರ್ಕದಲ್ಲೇ ಬೆಳೆದು ಬಂದ ಅವಳು ಎಂದಿಗೂ ಧ್ಯೇಯವಾದಿನಿಯಲ್ಲ. ಧ್ಯೇಯವು ಅವಳ ಜೀವನದ ವಾಮಮಾರ್ಗ. ತನ್ನ ಮಗಳು ಆ ಮಾರ್ಗದಲ್ಲಿ ಮುನ್ನ ಡೆದು ಒಬ್ಬ ಅನಾಮಧೇಯನಿಗಾಗಿ ಕಾತರಗೊಂಡು ಕಾದಿರುವುದು ಅವಳ ಆತ್ಮಾಭಿಮಾನಕ್ಕೆ ಆಘಾತ. ಮೊದಲು ಎರಡು ದಿನಗಳಲ್ಲಿ ಅಂತಹ ಸಂಘಟನೆಗಳನ್ನು ಅವಳು ಒಪ್ಪಿದ್ದರೆ ಅದು ಅವಳ ಉದ್ದೇಶವಾಗಿಯಲ್ಲ— ಅಭಿಮಾನವಾಗಿ! ಆ ಅಭಿಮಾನವನ್ನೇ ಉದ್ದೇಶವಾಗಿ ಮಾರ್ಪಡಿಸುವುದ ರಲ್ಲಿ ಅವಳಿಗೆ ಆತ್ಮಸಮಾಧಾನವಿರಲಿಲ್ಲ. ಅದೇ ಅವಳ ಮಹತ್ವಾಕಾಂಕ್ಷೆ! ಅಂತಹ ಮಹತ್ವಾಕಾಂಕ್ಷೆಯಿಂದಾಗಿ ಅವಳ ಜೀವನ ಕಾಲವು ಸಫಲ ವಾಗಿದ್ದರೆ ತುಂಬಿದ್ದರೆ ಅದನ್ನೇ ಮಗಳೂ ಅನುಸರಿಸಬಾರದೇಕೆ?

ಶ್ರೀಧರಮೂರ್ತಿಯೂ ಎಲ್ಲಾ ದಿವಸಗಳನ್ನು ಸುಖವಾಗಿ ಕಳೆದಿಲ್ಲ. ಅವನ ಪಾಲಿಗೆ ಸುಖವು ಇನ್ನೂ ಒಂದು ಕಾಲ್ಪನಿಕ ವಸ್ತುವಾಗಿ ಉಳಿದಿದೆ. ಬೆಣ್ಣೆ ಕೂಡಿಸಿ ಬೆಣ್ಣೆ ತೆಗೆಯುವಂತೆ ಸುಖಕ್ಕೆ ಸುಖವು ಕೂಡಬೇಕು. ಪಾಪ! ಅವನು ಅಂತಹ ಸುಖವನ್ನೇನು ಕೂಡ ಕೊಡಬಲ್ಲ? ಅವನ ಮನೋವ್ಯಾ ಪಾರವು ಅವನೆಣಿಕೆಗಿಂತ ವಿಾರಿ ಮಸುಕಾಗಿದೆ. ಎಲ್ಲಾ ಮೋಡಗಳಲ್ಲಿಯೂ ಮಿಂಚಿನ ಬಳ್ಳಿ ಹುದುಗಿದೆ ಎಂಬುದು ಅವನ ಪ್ರತಿಪಾದನೆಯಾಗಿದ್ದಿತು.

ಆದರೆ ಈಗಲೀಗ ಅವನ ಸಿದ್ಧಾಂತವೇ ಅವನನ್ನು ವಂಚಿಸತೊಡಗಿದೆ. ಸಮ್ಮತವಲ್ಲದ ಸಮಾಜದ ಕಟ್ಟು ನಿಟ್ಟುಗಳನ್ನು ವಿಚಾರವಂತನು ಮೀರಬಹುದು. ಆದರೆ ಅದರ ಅವಹೇಳನವನ್ನು ಸಹಿಸಬಲ್ಲನೆ? ಆದರ್ಶಕ್ಕಾಗಿ ಮನಸ್ಸನ್ನು ಕಾತರಿಸಿ ಕೆಳಗಡೆ ಕೈ ನೀಡಿದಂತೆಲ್ಲ ಅಂದಿನ ಸ್ವಪ್ನವು ಆಕಡೆ ಕೈತೋರಿಸಿ ಕೇಳಲಿದೆ—ಅದು ಯಾರ ಮಗಳು? ಸಮಾಜದ ರೋಷವನ್ನು ಸಾವಿರ ಪಟ್ಟು ತಾಳಿಕೊಳ್ಳಬಹುದು—ಅವಜ್ಞೆಯನ್ನಲ್ಲ! ಸಿಟ್ಟಿನ ಹೊಗೆಗಿಂತ ಅಪಹಾಸದ ನಗೆಯು ತೀವ್ರವಾಗಿದೆ. ಸಿಟ್ಟು ಸಾಧಿಸದುದನ್ನು ನಗೆಯು ಸಾಧಿಸಲಿದೆ. ಅಂತಹ ವಿಕಟವಾದ ನಗೆಯಲ್ಲಿ ತೇಲಿಹೋಗಲು ಶ್ರೀಧರನು ಧೈರ್ಯಗೊಳ್ಳಲಿಲ್ಲ. ಅವನು ಹಿಂದೆ ಮುಂದೆನೋಡಿ ಯೋಚನೆಗೀಡಾದನು. ಕರ್ತವ್ಯವು ಒಮ್ಮೆ ಯೋಚನೆಗೀಡಾಯಿತೆಂದರೆ ಮತ್ತೆ ಎಲ್ಲವೂ ವಿಪರ್ಯಸ್ತವಾಗುವುದು. ನೆಲೆತಪ್ಪಿ ಹೆಜ್ಜೆಯು ಹಿಂಜರಿಯುವುದು. ಅಂತೆಯೇ ಶ್ರೀಧರನೂ ಹಿಂಜರಿದನು. ಒಮ್ಮೆ ನಿಟ್ಟುಸಿರು ಬಿಟ್ಟು ಒಮ್ಮೆ ಹಣೆಯ ಮೇಲಣ ಬೆವರು ಒರೆಸಿಕೊಂಡು ಹೃದಯದ ಒಂದು ಭಾರವನ್ನು ಹೊರ ಹೊಮ್ಮಿಸಿದನು. ಆದರೂ ಅಂಬುಜಾಕ್ಷಿಯು ನಿರಾಲಮೂರ್ತಿ ಮುಂದೆ ಬಂದು ನಿಂತು ಕೇಳುತಿದ್ದಿತು—ನನ್ನದೇನು ತಪ್ಪಿದೆ? ಸಮಾಜವೇ ಸ್ವೇಚ್ಛೆಯಿಂದ ಒಪ್ಪಿಸಿದ ಕಳಂಕವು ಸಮಾಜಕ್ಕೇ ಬೇಡವಾದರೆ ಈ ಅಪರಾಧದ ಹೊರೆ ಯಾರ ತಲೆಯಮೇಲೆ? ಪಾಪದ ಅರಿವಿಲ್ಲದ ಸಂತಾನವು ಪಾಪ ಸಂತಾನವಾಗಿ ಪ್ರಪಂಚಕ್ಕೇ ಹೇಯವಾದರೆ ಇದಕ್ಕೆ ಉತ್ತರವನ್ನು ನೀವೇ ಕೊಡಿರಿ! ನನ್ನ ಸ್ಥಾನದಲ್ಲಿ ಮುಗ್ಧ ಪ್ರಾಣಿಯಾಗಿ ನೀವೇ ನಿಂತು ಹೇಳಿರಿ! ಸಮಾಜದ ಮುಸುಕಿನೊಳಗೆ ನಿಂತು ನೀವು ಮಾಡಿದ ಕೊಲೆ ದರೋಡೆ ವ್ಯಭಿಚಾರಗಳ ಅನಂತ ಪಾಪದ ಭಾರವು ನಿಮ್ಮ ಸಂತಾನವನ್ನು ಸಮಾಜದಿಂದ ಹೊರದಬ್ಬಿದೆಯೆ? ಅದಕ್ಕೆ ಪರಿಹಾರವಿರುವುದಾದರೆ ನಾನೂ ಮನುಷ್ಯಳೆ-ದೇವತೆಯಲ್ಲ! ಪಾಪಪೂರ್ಣವಾದ ಮನುಷ್ಯಲೋಕದಲ್ಲಿ ದೇವತೆಗಳನ್ನು ಕಾಣಲು ಹವಣಿಸಬೇಡಿರಿ. ದುಃಖ ಪ್ರಪಂಚವನ್ನು ಕಾಣಬೇಕಾದುದು ಸುಖದಿಂದಲ್ಲ—ದುಃಖದಿಂದ! ನಿಮ್ಮ ಹೃದಯದಲ್ಲಿ ದುಃಖೀಜನಾಂಗದ ವೇದನೆಗಳನ್ನು ಅಧಿಷ್ಠಾನಗೊಳಿಸಿ ಸಹಾನುಭೂತಿಯಿಂದ ಸಂತೈಸಿನೋಡಿರಿ! ಮತ್ತೆ ನೀವೇ ಯೋಚಿಸಿ ಹೇಳಿರಿ-ನನ್ನದೇನು ತಪ್ಪಿದೆ?

ತಪ್ಪಿಲ್ಲ—ತಪ್ಪಿಲ್ಲ! ಶ್ರೀಧರಮೂರ್ತಿಯು ಸಾವಿರ ಬಾರಿ ತಾನೇ ಹೇಳಿಕೊಂಡನು—ಏನೇನೂ ತಪ್ಪಿಲ್ಲ! ಹೇಳುತಿದ್ದಂತೆ ಅವನ ಹೆಜ್ಜೆಯು ಅತ್ತಕಡೆ ಮುಂಬರಿಯಿತು. ಕೋಣೆಯಿಂದ ಹೊರಗೆ ಕಾಲಿಟ್ಟಾಗ ಏಜಂಟ ಮಹಾಶಯನು ಕೇಳಿದ—ಏನಯ್ಯ! ಈ ಹೊತ್ತೂ ಮಳೆಗೆ ಹೋಗಿ ಆ ಮನೆಯ ಮುಂದೆ ಕಾಲುಜಾರಿಬೀಳಬೇಕೆಂದು ಯೋಚಿಸಿದ್ದಿಯಾ? ಬಹಳ ಚಲೋದಾಯ್ತು! ನಾನೂ ಬರಲೋ ಜೊತೆಗೆ?

ಊಹೂಂ! ಶ್ರೀಧರಮೂರ್ತಿ ಆ ಮನೆಯತ್ತಕಡೆ ಹೋಗಲೇಯಿಲ್ಲ. ಮುಖ ತಿರುಗಿಸಿ ಮೇಲುದಾರಿ ಹಿಡಿದು ನೇರವಾಗಿ ಮುನ್ನಡೆದನು. ಮುನ್ನಡೆದು ಮುಂದಿನ ಬೆಟ್ಟವೇರಿ ಕುಳಿತನು. ಬೆಟ್ಟದ ತುದಿಯಿಂದ ಕೆಳಗೆ ನೋಡಿದಾಗ ಜನರೆಲ್ಲ ಕೆಳಗಡೆ ಚಿಕ್ಕ ಚಿಕ್ಕ ಪ್ರಾಣಿಗಳಾಗಿ ಸುಳಿಯುತಿದ್ದಂತೆ ಭಾಸವಾಯಿತು. ವೃಥಾಭಿಮಾನದ ತುತ್ತತುದಿಯೇರಿದವನಿಗೆ ತನ್ನ ಕೆಳಗಡೆಯ ಜೀವನವೂ ಅಂತೆಯೇ ಕ್ಷುಲ್ಲಕವಾಗಿ ಕಾಣುವುದಿದೆಯಲ್ಲ—ಇದೂ ಹಾಗೆಯೆ!

ಮತ್ತು ಮೂರು ತಿಂಗಳುಗಳು ಕಳೆದುವು. ಆ ಮೂರು ತಿಂಗಳುಗಳಲ್ಲಿ ಶ್ರೀಧರಮೂರ್ತಿಯು ಎಷ್ಟು ಮನಸ್ಸು ನವೆದಿರುವನೋ ಅಷ್ಟೇ ಅಂಬುಜಾಕ್ಷಿಯೂ ನವೆದಿರುವಳು. ತಾಯಿಯ ಕೋಪತಾಪಗಳು ಅವಳ ಪ್ರಥಮ ಪ್ರೇಮದ ಬೇರು ಕೀಳಲು ಯತ್ನಿಸಿದ್ದರೆ ಅದೇನೂ ಅಷ್ಟೊಂದು ಯಶಸ್ವಿಯಾಗಿಲ್ಲ. ಅಂತಹ ಸಾಂತ್ವನೆಗಳು ಅವಳ ನಿಗೂಢ ವ್ಯಥೆಯ ಮೇಲೆ ಮುಸುಕಿಟ್ಟು ಮೈತಟ್ಟಿರಬಹುದು. ಆದರೆ ಬೇರುಬಿಟ್ಟ ಬಳ್ಳಿ ಸುಲಭವಾಗಿ ಕೀಳಲು ಬರುವಂತಿಲ್ಲ. ಅದಕ್ಕಿಂತಲೂ ಹೆಚ್ಚಾಗಿ ತಾಯಿಯ ಸಮ್ಮುಖದಲ್ಲಿ ತನ್ನ ಆದರ್ಶದ ಮಾತು ಕಿರಿದಾಯಿತಲ್ಲಾ—ಎಂಬ ಕಳವಳವು ಕಲ್ಲೋಲವೇಳುತ್ತಿದ್ದರು. ಅಂದು ಬುದ್ಧಿಯಿಲ್ಲದವಳು—ಎಂದ ಅವಳ ಮಾತಿಗೆ ಈಗ ಏನು ಉತ್ತರ ಹೇಳಬಲ್ಲಳು? ಅವಳ ಆತ್ಮಾಭಿಮಾನವು ಗಾಜಿನಂತೆ ಚೂರು ಚೂರಾಗಿ ಆ ಒಂದೊಂದು ಚೂರಿನಲ್ಲೂ ತಾಯಿಯ ಅವಹೇಳನದ ಪ್ರತಿಬಿಂಬವು ಮೂಡಿದ್ದಿತು. ಅದಕ್ಕಾಗಿ ಹೇಗೆ ಅವಳು ಕಣ್ಣೀರು ಸುರಿಸಬಲ್ಲಳು? ಕಾರಣ—ಶ್ರೀಧರಮೂರ್ತಿಯ ಸೌಜನ್ಯದಲ್ಲಿ

ಕೂಡಿಮದು ಆತ್ಮ ಮಾತ್ರ—ದೇಹವಲ್ಲ! ಅದಕ್ಕಾಗಿ ಕೂಡಿದ ಆತ್ಮವು ಕುದಿಕುದಿವರೆ ಕೂಡದ ಆತ್ಮವು ಕಣ್ಣೀರುಸುರಿಸುವಂತಿಲ್ಲ. ಹಾಗೆ ಸುರಿದರೆ ಅದು ಗೌರವದ ತಿಲಾರ್ಪಣ! ಹೀಗಾಗಿ ಅವಳು ತನ್ನ ಕೋಣೆಯಲ್ಲೇ ಕುಳಿತು ತಾನೇ ತಾನೇ ಗುಣುಗುಟ್ಟುವಳು; ಹಾಡುವಳು. ಮತ್ತೆ ಮೌನ ವಾಗಿ ಓದುವಳು; ಅಥವಾ ಪುಸ್ತಕದ ಪುಟ ಮಗುಚುವಳು. ಒಮ್ಮೊಮ್ಮೆ ಒಂದು ಕಾಗದ ಬರೆದು ಕಳುಹಿಸಬೇಕೆಂಬ ನಿರ್ಧಾರಕ್ಕೂ ಬರುವಳು. ಆದರೆ ಏಕೆ ಬರೆಯಬೇಕು? ಎಂಬ ವಿಚಾರ ತಿಳಿಯದೆ ಅಲ್ಲಿಗಲ್ಲಿಗೇ ಕುದುರು ತ್ತಿದ್ದಳು. ಆತ್ಮಾನುಭವವು ಏಕದೇಶಿಕವಲ್ಲ. ತನ್ನ ಮನಸ್ಸು ಕುದಿದಿದ್ದರೆ ಅಲ್ಲಿ ಅವನ ಮನಸ್ಸೂ ಕಾದಿರಬೇಕು. ಅದಲ್ಲವಾದರೆ ಆ ಪಾಷಾಣದ ಮೇಲೆ ಏಕೆ ನೀರು ಸುರಿಯಬೇಕು? ಆ ಪ್ರಯತ್ನವು ನಿರರ್ಥಕ!

ತುಫಾನಿನ ನಂತರ ಸಮುದ್ರವು ಭೀಮಸುಂದರವಾಗಿ ಪ್ರಶಾಂತವಾದ ರೀತಿ ಶ್ರೀಧರಮೂರ್ತಿಯು ಮೇಲಿನ ಎರಡು ತಿಂಗಳ ಕಾಲ ಕಳೆದಿದ್ದನು. ಅವನ ಹೃದಯವು ಎಷ್ಟು ಕುದಿದಿದ್ದರೂ ತಲೆಯು ಎಷ್ಟು ಬಿಸಿಯೇರಿ ದ್ದರೂ ಅವನ ಆಫೀಸಿನ ಕೆಲಸಗಳಾವುವೂ ಹಿಂದುಳಿದಿದ್ದಿಲ್ಲ. ಸೆಟ್ಲ್ಮೆಂಟು ಆಫೀಸಿನ ಕಾರ್ಯಕಲಾಪಗಳು ಎಂದಿನಂತೆಯೇ ಸಾಗಿದ್ದುವು. ಅಥವಾ ಹೆಚ್ಚಿನ ಅಂಗಗಳಲ್ಲಿ ಮುಗಿಯುತ್ತಾ ಬಂದಿದ್ದುವು. ಮತ್ತೊಂದು ವಾರದಲ್ಲಿ ಎಲ್ಲವೂ ಕೊನೆಗಂಡು ಕೊಯಮುತ್ತೂರಿಗೆ ವರ್ಗಾಯಿಸಲ್ಪ ಟ್ಟಿತು.

ಈ ತನಕ ಕೆಲಸವಿದ್ದಾಗ ಹಿಡಿದಿದ್ದ ಅವನ ಮನಸ್ಸಿನ ಬಿಗಿತ ಆಗ ಲಾಗ ಸಡಿಲಾಯಿತು. ಎದೆಬಿಗಿದಿದ್ದ ದಮ್ಮು ಹೊರಸೂಸಿದಂತೆ ಒಮ್ಮೆಗೆ ಉಸಿರು ಬಿಟ್ಟು ಸುತ್ತಲೂ ನೋಡಿದನು. ಹಿಡಿಯ ಬಿಗಿತ ಬಿಟ್ಟಮೇಲೆ ಜೆಲ್ಲಾಪಿಲ್ಲಿಯಾದ ನೂಲೆಳೆಯಂತೆ ಮನಸ್ಸಿನ ವೇದನೆಯ ವಿರುದ್ಧವ್ಯಾಪಾ ರಗಳ ಘರ್ಷಣೆಯಿಂದಾಗಿ ಅಸ್ತವ್ಯಸ್ತವಾಗಿದ್ದಿತು. ಇನ್ನೆರಡು ದಿನಗಳಲ್ಲಿ ಈ ಊರು ಬಿಟ್ಟು ಬೇರೆ ಊರು ಸೇರಲಿರುವ ನಿಶ್ಚಯಜ್ಞಾನದೊಂದಿಗೆ ಇಷ್ಟು ದಿನಗಳಲ್ಲಿ ಹಿಂದುಳಿದ ಒಳ್ಳಿತು ಕೆಡುಕುಗಳ ವಿಮರ್ಶೆಯತ್ತ ಮನಸ್ಸು ಸರಿಸಿ ತೂಗಿ ನೋಡತೊಡಗಿದನು. ನೆನಪಿನ ಆ ತುದಿಯಲ್ಲಿ

ವೊತ್ತವೊದಲಿಗೆ ಕಾಣಲಿರುವವಳು ಆ ಅಂಬುಜಾಕ್ಷಿ! ಬೊಗಸೆಗಂಗಳಲ್ಲಿ ನೀರುತುಂಬಿ ಮನೆ ಹೆಬ್ಬಾಗಿಲಲ್ಲಿ ನಿಂತು—ಒಳಗೆ ಬರಬಹುವಲ್ಲ—ಎಂದು ಕಾದು ಕರೆದಿರುವಳು. ಆ ಮಾತು ಇನ್ನೂ ಅವನ ಕಿವಿಗಳಲ್ಲಿ ಇನ್ನೂ ಮೃದುಸ್ಪರ್ಶಿಯಾಗಿ ಮಧುರವಾಗಿರುವುದು. ಆದರೆ ಈ ತನಕ ಅಂತಹ ಆಕರ್ಷಣೆಗಳನ್ನು ಪಾಪಸಂಕಲ್ಪವೆಂದು ಮನಸ್ಸು ಎಣಿಸಿ ಹಿಮ್ಮೆಟ್ಟಿದ್ದರೆ ಈಗ ಒಂದು ಬೇಗೆಯು ಎದೆಯತ್ತ ಗುಡುಗುಡಿಸತೊಡಗಿದೆ. ಎಷ್ಟೋ ತಡವೆ ಸ್ಥಾನಮಾನಗಳ ಗೌರವವು ಸಂಕಲ್ಪದೊಡನೆ ಸೆಣಸುವುದು. ಕೆಲ ವೊಮ್ಮೆ ವಾತಾವರಣವು ಅಂತಹ ಗೌರವವನ್ನು ಕಿರಿದಾಗಿಸಿ ಸಂಕಲ್ಪವನ್ನು ಪುನರುಜ್ಜೀವಿಸುವುದು. ಆಗ ಸ್ಥಾನಮಾನಗಳ ಕಟ್ಟು ಕಳಚಿಬಿದ್ದು ಒಪ್ಪುತಪ್ಪುಗಳ ವಿಚಾರಗಳ ಗಡಿಮೀರಿ ಆತ್ಮದ ಕಲಕು ಕೆದರಿ ಸುಖಕ್ಕಾಗಿ ಹಾತೊರೆಯುವುದು. ಅದೇನು ನಿತ್ಯವೊ—ಕ್ಷಣಿಕವೊ ಆ ವಿವೇಕವಿಲ್ಲ. ವಿಚಾರವು ಆತ್ಮದ ಮುಖವಾಡದಂತೆ. ಆತ್ಮವು ಎಂದೆಂದಿಗೂ ಶುಚಿಯಾಗಿ ರುವುದಿಲ್ಲ—ಉಜ್ವಲವಾಗಿರುವುದಿಲ್ಲ. ಆದರೆ ಅಂತಹ ಅಸುಂದರ ಸಂದರ್ಭ ಗಳಲ್ಲಿ ವಿಚಾರವು ಪಾಪಪುಣ್ಯಗಳ ಮುಸುಕಿಟ್ಟು ಆತ್ಮವನ್ನು ಸೊಗಸು ಗೊಳಿಸಿ ಹಸನಾಗಿಸುವುದು. ವಿಚಾರವು ಸುಖದ ಹೊಲದತ್ತ ಕಡೆ ಆತ್ಮ ವನ್ನು ಮೇಯಬಿಟ್ಟಾಗ ಅದರ ಪರಿಣಾಮವೇನು?

ಅಂತಹ ಪರಿಣಾಮದ ಕಡೆಗೆ ಶ್ರೀಧರಮೂರ್ತಿಯು ಗಮನ ಕೊಡ ಲಿಲ್ಲ. ಅವನ ಆತ್ಮವು ಮಾತ್ರ ಅದಕ್ಕಾಗಿ ಹಾತೊರೆಯಿತು. ಆ ಪರಿಣಾಮವು ಹಿತವೇ ಇರಲಿ ಅಹಿತವೇ ಇರಲಿ ಅದರ ಅನುಭವವಂತೂ ಅವನ ಕಣ್ಣ ಮುಂದೆ ನಡೆಯುವಂತಿಲ್ಲ. ಅವನು ಊರುಬಿಟ್ಟು ಕೊಯಮುತ್ತೂರ ಕಡೆ ತೆರಳುವದಿನ ಇನ್ನುಳಿದುದು ಎರಡೋ ಮೂರೋ! ಇಂತಹ ದೌರ್ಜನ್ಯ ದಿಂದ ಅವನ ಹೃದಯವು ಪ್ರಚೋದಿತವಾಯಿತು. ಪ್ರಚೋದನೆಯು ಒಂದು ಪ್ರೇರಣೆ ಮಾತ್ರ. ಮತ್ತಿನ ಕೆಲಸವನ್ನು ಸಾಧಿಸುವುದು ಆತ್ಮ ವಲ್ಲ—ದುರಾತ್ಮ!

ಅಂತಹ ದುರಾತ್ಮನು ಸೆಳೆದತ್ತ ಕಡೆ ಶ್ರೀಧರಮೂರ್ತಿಯು ಮನಸ್ಸು ಬಿಟ್ಟನು. ಗಾಳಿಪಟಕ್ಕೆ ತೂಗಬಿಟ್ಟ ಹಗ್ಗದಂತೆ ಅವನ ದೇಹವು ಅದಕ್ಕನು

ಸಾರವಾಗಿ ಸಾಗಿತು. ಆ ಸಂದರ್ಭದಲ್ಲಿ ಹೆಚ್ಚಿನ ವಿವೇಕಕ್ಕೆ ಅವಕಾಶ ವಿರಲಿಲ್ಲ. ಒಪ್ಪೊತಪ್ಪೊ ಎಂಬ ನಿರ್ಧಾರಕ್ಕೆ ಬರುವ ವೇಳೆ ಅವನು ಅಂಬು ಜಾಕ್ಷಿಯ ಮನೆಯೆದಿರುಗಡೆಯ ಮೆಟ್ಟಲ ಮೇಲಿದ್ದನು.

ಬಾಗಿಲು ಹಾಕಿದ್ದಿತು. ನೂಕಿದಾಗ ಕದವಿಕ್ಕಿತ್ತು. ಮೆಲ್ಲನೆ ಅಗಣಿ ಯಲುಗಿಸಿದನು. ಯಾರೂ ಓ ಕೇಳಲಿಲ್ಲ. ಕಿಟಕಿಯತ್ತ ಕಂಡಾಗ ಯಾರೂ ಕಂಡುಬರಲಿಲ್ಲ. ಅಥವಾ ಬೇರೆಯಾವುದಾದರೂ ಮನೆಯ ಬಾಗಿಲು ಬಡಿಯುತ್ತಿರುವೆನೆ? ಎಂದು ನಾಲ್ಕು ಸುತ್ತಲೂ ನೋಡಿಕೊಂಡನು. ಆಗ ಸುಪ್ತವಾಗಿದ್ದ ಅವನ ಮನೋವಿಚಾರವು ಮತ್ತೊಮ್ಮೆ ಮೆಲ್ಲನೆ ಹೇಳಿ ದಂತಾಯಿತು—ನಡೆ! ಹಿಂದೆ ನಡೆ! ಇನ್ನೂ ಕಾಲವು ಕೈಮೀರಿಲ್ಲ.

ಒಮ್ಮೆ ಸುತ್ತಲೂ ನೋಡಿ ಮೆಟ್ಟಲ ಕೆಳಗೆ ಕಾಲಿಟ್ಟು ದಾರಿಗಿಳಿದನು. ಎರಡು ಹೆಜ್ಜೆ ಮುಂದಿಟ್ಟಾಗ ಮನೆಯ ಕಿಟಕಿಯ ಕಡೆಯಿಂದ ಯಾರೋ ಬಂದು—ಓ ನೀವೊ!—ಎಂದಂತಾಯಿತು. ತಿರುಗಿ ನೋಡಿದನು. ಅವಳೇ–ಅಂಬುಜಾಕ್ಷಿ! ಬಾಗಿಲು ಅರ್ಧವಾಗಿ ಸರಿಸಿ ವಿನಯವಾಗಿ ತಲೆಬಾಗಿ ನಿಂತಿದ್ದಳು. ಶ್ರೀಧರಮೂರ್ತಿಯ ಹಿಂದೆ ನಡೆ—ಎಂದ ಒಳಮಾತಿನ ಸದ್ದು ಒಳಗೇ ಹುದುಗಿ ಹೋಯಿತು. ಅಂತೆಯೇ ನಿಂತು ಮನಸ್ಸು ತೂಗು ತ್ತಿದ್ದಾಗ ಆಕೆ ಅರ್ಧಮರ್ಧ ಸ್ವರದಿಂದ ಮೃದುವಾಗಿ ಕೇಳಿದಳು—ಈ ಕಡೆ ಬರೋದಿಲ್ಲವೆ?

ಹೆಣ್ಣಿನ ಮುಂದೆ ಪ್ರಪಂಚದ ಯಾವ ನಿರ್ಧಾರವೂ ನಿಲ್ಲುವುದಿಲ್ಲ. ಪ್ರಕೃತಿಯ ಮುಂದೆ ಪೌರುಷವು ಉಡುಗಿಹೋಗುವುದು. ಗುಡುಗಿನ ಕಾರ್ಕಶ್ಯವು ದಿಕ್ಕು ದಿಕ್ಕುಗಳಲ್ಲಿ ಪ್ರತಿಧ್ವನಿಸಿ ಕಿವಿ ಕಿವುಡಾಗಿಸಬಹುದು. ಆದರೆ ಅದು ವೀಣೆಯ ಮಧುರ ನಿನಾದದಂತೆ ದಿಗಂತರಾಳದಲ್ಲಿ ವಿಲೀನವಾಗಿ ಮತ್ತೂ ಮತ್ತೂ ತಾನಗೊಂಡು ಚಿರಸ್ಥಾಯಿಯಾಗಲಾರದು. ಅಂಬು ಜಾಕ್ಷಿಯ ಆ ನೋಟ ಮಾತು ಅವನನ್ನು ಸಹಸಾ ಸೆಳೆದುಬಿಟ್ಟಿತು.

ಮುಂಗಡೆ ಬಾಗಿಲು ಹಾಕಿ ಒಳಗೆ ಕರೆದೊಯ್ಯುತ್ತ ಅವಳು ಮೆಲ್ಲನೆ ಗುಣುಗುಟ್ಟಿದಳು—ಇಷ್ಟು ದಿನವೂ ಬರಲೇಯಿಲ್ಲವಲ್ಲ! ಬೇಸರಬಂತೋ ಏನೋ!—

ಶ್ರೀಧರಮೂರ್ತಿಯು ಅದೇನು ಆವೇಶವೊ—ಆಕ್ರೋಶವೊ ಎಂದು ತಿಳಿಯಲು ತಿರುಗಿ ನೋಡಿದನು. ಆದರೆ ಅದು ಆವೇಶವೂ ಅಲ್ಲ ಆಕ್ರೋಶವೂ ಅಲ್ಲ, ಅನುನಯ ಮಾತ್ರ. ಹೃದಯವನ್ನು ಮಿಡುಕಿ ಮಾತಾಡಿದ ಕರುಣೆಯ ಆಕ್ರಂದನ. ಕತ್ತಲುಕವಿದಹೊತ್ತು ಹೆಣ್ಣು ಹಕ್ಕಿಯೊಂದು ಕಣ್ಣುಮುಚ್ಚಿ ಕೊರಗುವುದಿದೆಯಲ್ಲ—ಅದೇರೀತಿ!

ಶ್ರೀಧರನು ಸುತ್ತಲೂ ನೋಡಿದನು. ಯಾರೂ ಇದ್ದಿಲ್ಲ. ಮೆತ್ತನೆ ಕೈಹಿಡಿದು ಹಿಸುಕಿ ಹೇಳಿದನು—

ಅಂಬೂ

ಮಾತಿಲ್ಲ.

ಅಂಬೂ

ಹೂಂ

ಕೋಪ ಬಂತೆ?

ಯಾರಮೇಲೆ?

ನನ್ನಮೇಲೆ

ಅವಳು ಮುಖವೆತ್ತಿ ನಸುನಕ್ಕಳು. ಕಣ್ಣು ತುಂಬಿದ್ದಿತು. ತುಟಿಯದುರುತಿದ್ದಿತು.

ಶ್ರೀಧರನು ಮತ್ತೊಮ್ಮೆ ಸುತ್ತಲೂ ನೋಡಿ ಕೇಳಿದನು—ಎಲ್ಲಾ ಎಲ್ಲಿಗೆ ಹೋಗಿರುವರು?

ಸಿನಿಮಾಕ್ಕೆ

ನೀನು ಯಾಕೆ ಹೋಗಿಲ್ಲ?

ಮುಖ ತಗ್ಗಿಸಿ—ಸುಮ್ಮನೆ—ಎಂದಳು.

ನಾನು ಈದಿನ ಇಲ್ಲಿ ಯಾರೂ ಬಾಗಿಲು ತೆರೆಯುವುದಿಲ್ಲವೆಂದೇ ಎಣಿಸಿದ್ದೆ.

ಅದೇನು?

ಬಾಗಿಲು ತಟ್ಟಿದಾಗ ಒಳಗಡೆ ಸದ್ದೇ ಕೇಳಲಿಲ್ಲ. ಮತ್ತೆ ಹಿಂದಿರುಗಿ ಹೋಗೋಣವೆಂದು ಬೀದಿಗಿಳಿದೆ.

ಅವಳು ಹೂಂ ಗುಟ್ಟಲಿಲ್ಲ. ಆದರೆ ಅರೆಗಣ್ಣಿನಿಂದ ಅವನ ಕಡೆನೋಡಿ ನಸುನಕ್ಕಳು.

ಎಂಟು ಗಂಟೆ ಹೊಡೆದಾಗ ಇಬ್ಬರೂ ಮಹಡಿಯಿಳಿದು ಕೆಳಗೆ ಬಂದರು. ಬರುತ್ತಾ ಶ್ರೀಧರಮೂರ್ತಿ ನಸುನಗೆಯಿಂದ ಕೇಳಿದನು—ನಾಳೆಯೂ ಸಂಜೆ ಮಾಳಿಗೆಯಲ್ಲಿ ಮೇಘದೂತ ಓದುತಿರುತ್ತೀಯಾ?

ಆಕೆ ಓರೆನೋಟ ಬೀರಿ ಮೌನವಾಗಿದ್ದಳು. ಮೌನಂಸಮ್ಮತಿ ಲಕ್ಷಣಂ!

ಶ್ರೀಧರಮೂರ್ತಿಯು ವಸಂತಕಾಲದ ಗಂಧಸಮೀರಣದಂತೆ ತುಂಬು ಮನಸ್ಸಿನಿಂದ ವಸತಿ ಸೇರಿದನು. ರಾತ್ರಿಯೆಲ್ಲಾ ಅವನ ಅಪಚಾರ ಬುದ್ಧಿಯನ್ನು ವಿವೇಕವು ಕೆರಳಿ ಕೇಳುತಿದ್ದಿತು—ಯಜ್ಞವೇದಿಕೆಯಲ್ಲಿ ಹವಿಸ್ಸನ್ನು ಹೊಯ್ದಿರುವಿ. ಅದರ ಪರಿಣಾಮಕ್ಕೆ ಸಿದ್ಧನಾಗಿರು. ಬಾಳನ್ನು ಕಲಕಿ ಅಪಚಾರಗೊಳಿಸಬೇಡ. ಅದರೊಡನೆ ಶಾಶ್ವತವಾದ ಬಾಳನ್ನು ಕೂಡಿಸಿ ಅದನ್ನು ಸುಂದರವನ್ನಾಗಿ ರಚಿಸು. ಮೇಲೆದ್ದು ಬರಲೆಳಸುವ ಜೀವನವನ್ನು ತಲೆ ಹೊಯ್ದು ಕೆಳಗುರುಳಿಸಬೇಡ. ಅದರ ಕಡೆ ನೆರವಿನ ಕೈ ನೀಡಿ ಉದ್ಧಾರಗೊಳಿಸು. ಜೀವನ ಲಕ್ಷಣವು ಅವನತಿಯಲ್ಲ—ಉನ್ನತಿ! ಪ್ರಪಂಚವನ್ನು ಹಸನಾಗಿಸುವ ಉದ್ಯಮದ ಸಾಹಸದಲ್ಲಿ ಪ್ರತಿಯೊಬ್ಬನ ಕೈವಾಡವಿದೆ. ಪ್ರಪಂಚವು ಸ್ಮಶಾನ ಕುರುಕ್ಷೇತ್ರವಲ್ಲ. ಸುಖಾರಾಮದ ಸುಂದರೋದ್ಯಾನ! ಮೊಳಕೆ ಮೊಳಕೆಗಳ ಬೆಳವಣಿಗೆಯ ಮುಖವನ್ನು ಮುರುಟ ಬೇಡ. ಅದಕ್ಕಾಗಿ ತ್ಯಾಗದ ಬಿಂದಿಗೆಯಿಂದ ಸಹನೆಯ ನೀರು ಸುರಿದು ಸತ್ಯದ ಶುಭಕಾಮನೆಗಳನ್ನು ಹಾರೈಸು. ವಿಶ್ವಜೀವನವು ಅಮಂಗಳದ ಮಾತೃಕೆಯಲ್ಲ. ಮಂಗಳದ ಪ್ರತೀಕವಾಗಲಿ! ಹೃದಯದ ರುದ್ರವೀಣೆಯಿಂದ ದುಃಖದ ದೈನ್ಯವೇದನೆಯಲ್ಲ—ಸುರ ಸಂಗೀತದ ನವಸೃಷ್ಟಿಯಾಗಲಿ!

ಅಂತಹ ನವಸೃಷ್ಟಿಯ ಕಡೆ ಆತನು ಕಣ್ಣು ಹೊಮ್ಮಿಸಿ ನೋಡಿದನು. ಕತ್ತಲಲ್ಲೂ ಅದು ಉಜ್ವಲವಾಗಿ ಕಂಡಿತು. ಆದರೆ ಆ ಭಾವನೆಯು ಮಿಂಚಿನಂತೆ. ಮಿಂಚು ಮನಸ್ಸಿಗೆ ಸೊಗಸಾಗಬಹುದು. ಆದರೆ ಜೀವನಕ್ಕೆ ಹೊಂದಿಕೊಳ್ಳಲು ಬಹುದೆ? ಕಾರಣ—ಸುಂದರವಾದುದೆಲ್ಲ ಸಮ್ಮತವಾಗಲಾರದು. ಸೌಂದರ್ಯಕ್ಕೂ ಸಮ್ಮತಿಗೂ ಮಹದಂತರವಿದೆ. ಸೌಂದರ್ಯವು

ತನ್ನ ಆತ್ಮದ ಸಾಕ್ಷಾತ್ಕಾರ. ಸಮ್ಮತಿಯು ಪರರ ಆತ್ಮಾವಲಂಬಿಯಾದ ವಿಚಾರ ವಿನಿಮಯ. ಮನುಷ್ಯನು ಸ್ವಾತ್ಮಾವಲಂಬಿಯಾಗಬೇಕೆಂದು ಹವಣಿಸಿದಾಗಲೆಲ್ಲ ಪರಾರ್ಥವು ತ್ಯಾಗದ ಹೆಸರಿನಲ್ಲಿ ಸ್ವಾರ್ಥವನ್ನು ಹವಿಗೊಳಿಸಿ ಅವನನ್ನು ಆತ್ಮವಂಚಕನನ್ನಾಗಿ ಮಾಡಿಯೇ ತೀರುವುದು. ಇದು ವಿಶಾಲವಾದ ವಿಶ್ವಧರ್ಮ! ನಕ್ಷತ್ರಗಳು ದೊಡ್ಡವಿರಬಹುದು. ಆದರೆ ಮಹತ್ತರವಾದ ಆಕಾಶದಲ್ಲಿ ಅವುಗಳು ಚಿಕ್ಕಚಿಕ್ಕ ಗುಳಿಗೆಗಳು. ಅಂತೆಯೇ ಆತ್ಮದ ವ್ಯಾಪಕತೆಯು ವೈಯಕ್ತಿಕವಾಗಿ ವಿಸ್ತಾರವಿರಬಹುದು. ಆದರೆ ವಿಶ್ವಧರ್ಮದ ಮುಂದೆ ಅದರ ಸ್ಥಾನ ಮಾನವು ಅಸಂವ್ಯಕ್ತವಾದ ಅಣುವಾಗಿರುವುದು!

ಶ್ರೀಧರಮೂರ್ತಿ ಹಕ್ಕಿಗೂ ಹಗುರಾಗಿ ಬೆಳಗೆದ್ದಿರುವನು. ಅಂತೆಯೇ ಅವನ ಹೃದಯವು ಸುಪ್ರಭಾತದ ಆಶಾಕಿರಣಗಳ ಮುಂದೆ ಕಣ್ದೆರೆದು ಅಯಾಚಿತವಾಗಿ ಹಾಡತೊಡಗಿದೆ. ಅದು ಅಂದಿನ ಮನೋವೃತ್ತಿಯೋ ವಾತಾವರಣದ ರಸಸಿದ್ಧಿಯೋ ಅಂತೂ ಹೃದಯದ ಮೇಲೆ ವಾತಾವರಣವಿಟ್ಟ ಆಚ್ಛಾದನೆ ಎನ್ನಬಹುದು. ಅಂತಹ ಸುಖದ ಕೇಂದ್ರದಲ್ಲಿ ಓಲಾಡುತಿದ್ದಾಗಲೇ ಅವನ ಮುಖ್ಯಾಧಿಕಾರಿಯಿಂದ ಆದೇಶಬಂದಿತು—ಇವತ್ತು ನಾಳೆಯಲ್ಲಿ ಹೊರಡಲಿಕ್ಕೆ ಸಿದ್ಧವಾಗಿರಬೇಕೆಂದು.

ಉಳಿದ ಕೆಲವೇ ಹೊತ್ತಿನ ಸದುಪಯೋಗಕ್ಕಾಗಿ ಅವನು ಆ ಸಂಜೆ ಅಂಬುಜಾಕ್ಷಿಯ ಮನೆಯ ಮೆಟ್ಟಲೇರಿದನು. ಆ ಮುಗ್ಧ ಪ್ರಣಯಿನಿಯು ಅವನ ಬರವನ್ನೇ ಕಾದುನಿಂತಿದ್ದಳು ಬಾಗಿಲಬಳಿ. ನಸುನಗುತ್ತ ಒಳಗೆ ಕರೆದೊಯ್ದಳು.

ಮಹಡಿಯ ಮೇಜಿನ ಮೇಲೆ ಮೇಘದೂತಕಾವ್ಯವು ಅರ್ಧ ತೆರೆದೇ ಇದ್ದಿತ್ತು. ಪುಟ ಮುಂದುವರಿದಿದ್ದಿಲ್ಲ. ಆ ಕಾವ್ಯದ ಮನನವು ಹೃದಯದ ಬಿಸುಪಿನಿಂದಾಗಿ ನಿನ್ನೆ ಅಲ್ಲಿಗಲ್ಲಿಗೇ ಹಿಡಿದು ನಿಂತಿದ್ದಿತೋ ಏನೋ !

ಸುಖದ ಸರತಿಯು ಬಾಳಿಗೆ ಎಂದೆಂದಿಗೂ ಬರುವುದಿಲ್ಲ. ಬಂದಾಗ ಬದುಕು ದುಃಖದ ನೇಮದ ಕಡೆ ನಿಲುಕುವುದಿಲ್ಲ. ಕ್ಷಣ ಜಗತ್ತಿನಲ್ಲಿ ದುಃಖದ ಕಲ್ಪನೆಯು ಯಾರಿಗೆ ಬೇಕಾಗಿದೆ? ಶ್ರೀಧರಮೂರ್ತಿಯು ಸುಖಾಲಸಿಕೆ

ಯಿಂದ ಮಂಚದ ಮೇಲೆ ಬಿದ್ದುಕೊಂಡು ಮೇಘದೂತವನ್ನು ಓದಿದನು. ಕಾವ್ಯವು ರಸಕ್ಕೆ ಉದ್ಬೋಧಕ. ರಸವು ಮನಸ್ಸಿನ ಸಾಹಿತ್ಯ ಮಾತ್ರವಲ್ಲ--ಜೀವನದ ಸಾಹಿತ್ಯ--ಸಾಮರಸ್ಯ!

ಶ್ರೀಧರಮೂರ್ತಿ ತನ್ನಷ್ಟಕ್ಕೆ ಅನುಭವಿಸಿ ನಕ್ಕನು. ಮತ್ತೆ ಓದಿದನು.

ತಾಂಚಾವಶ್ಯಂ ದಿವಸಗಣನಾ ತತ್ಪರಾಮೇಕ ಪತ್ನೀ
ಮವ್ಯಾಪನ್ನಾ ಮವಿದಿತಗತಿರ್ದ್ರಕ್ಷ್ಯತಿ ಭ್ರಾತೃಜಾಯಾಂ
ಆಶಾಬಂಧಃ ಕುಸುಮಸದೃಶಂ ಪ್ರಾಯಶೋಹ್ಯಂಗನಾನಾಂ
ಸದ್ಯಃ ಪಾತಿ ಪ್ರಣಯಿ ಹೃದಯಂ ವಿಪ್ರಯೋಗೇ ರುಣದ್ಧಿ

ತಿಳಿಯಿತಷ್ಟೆ?

ಸ್ವಲ್ಪ ಸ್ವಲ್ಪ—

ಕವಿ ಕಾಳಿದಾಸನು ಇನ್ನೊಬ್ಬರಿಗಾಗಿ ಕಾವ್ಯ ಬರೆದಿಲ್ಲ. ಅವನ ಕಾವ್ಯಶ್ರೀ ಅವನಿಗಾಗಿ. ಅವನ ಕಾವ್ಯ ಕಾಮಿನಿ ಅವನಲ್ಲೇ ಅನುರತಳು. ಆಕೆ ಓದುಗರನ್ನು ಮನವೊಲಿಸುವುದಾದರೆ ಅದು ಸಾಧ್ವಿಯು, ತನ್ನ ಉನ್ನತ ಗುಣಗಳಿಂದ ಇನ್ನೊಬ್ಬರ ಮನವೊಲಿಸಿದಂತೆ! ಆದುದರಿಂದಲೇ ಅವನ ಕಾವ್ಯವು ಚಿರಸ್ಥಾಯಿಯಾಗಿದೆ–ಸಾಹಿತ್ಯದ ಧ್ರುವತಾರೆಯಾಗಿದೆ! ಆದಿಕವಿ ವಾಲ್ಮೀಕಿಯು ರಾಮಾಯಣವನ್ನು ಹೇಗೆ ಬರೆದನು ಗೊತ್ತೆ?

ತಾವೇ ಹೇಳಬೇಕು.

ಬೇಡನೊಬ್ಬನ ಬಾಣವು ಊರಿದುದು ಕ್ರೌಂಚ ಪಕ್ಷಿಯ ಹೃದಯದಲ್ಲಿಯಲ್ಲ. ಕವಿವಾಲ್ಮೀಕಿಯ ಹೃದಯದಲ್ಲಿ. ಆ ಬೇನೆಯೇ ರಾಮಾಯಣದ ಸೀತಾದೇವಿಯ ಕರುಣಾತ್ಮಕವಾದ ಕತೆ. ಅಂತಹ ಬೇನೆಯೇ ಕವಿಯ ಸಹೃದಯತೆಯನ್ನು ಕುಲುಕಿ ಕುಲುಕಿ ಗದುಕಗೊಳಿಸಿತು. ಅದನ್ನೇ ದೇವೀ ವಾಣಿಯು ವೀಣೆಹಿಡಿದು ಹೊರಹೊಮ್ಮಿಸಿದಳು. ಆದುದರಿಂದಲೇ ಅದರ ಮಧುರವಾದ ನಿನದ ಇಂದಿಗೂ ಕೇಳಿಬರುತಿದೆಯಲ್ಲ? ತ್ರೇತಾಯುಗದ ಸೀತೆಯ ಆಕ್ರಂದನ ಇನ್ನೂ ಕೇಳಿ ಬರುತಿದೆಯಲ್ಲ?

ಅಂಬುಜಾಕ್ಷಿ ಸುಮ್ಮನೆ ಅವನ ಮುಖವನ್ನೆ ನೋಡುತ್ತ ಕುಳಿತಿದ್ದಳು. ಅವಳ ಕಣ್ಣ ಮುಂದೆ ಶ್ರೀಧರಮೂರ್ತಿಯು ಚಿತ್ರಿಸಿದ ರಾಮಾಯಣದ

ರಮ್ಯರೂಪ ಕಲ್ಪನೆಯು ನೆಲೆಯಾಯಿತು. ಆ ಸತೀಸೀತೆಯ ಆಕ್ರಂದನ ಆವಳ ಕಿವಿಗೂ ಕೇಳಬಂದಿತು. ಕಣ್ಣುಗಳಲ್ಲಿ ನೀರೂರಿತು!

ಶ್ರೀಧರಮೂರ್ತಿಯು ಅವಳ ಕಣ್ಣೊರಸಿ ಗಲ್ಲ ಹಿಡಿದು ಹೇಳಿದ— ನೀನೂ ಒಬ್ಬಳು ಸೀತೆ!

ಅವನ ಸೀತೆಯು ಎದೆಯ ಮೇಲೆ ತಲೆಯಿಟ್ಟು ಬೆದರುಗಣ್ಣುಗಳಿಂದ ಅವನ ಮುಖವನ್ನೇ ನೋಡುತ್ತಿದ್ದಳು. ಅವನು ತಲೆ ನೇವರಿಸಿ ಮೃದುವಾಗಿ ಮುದ್ದಿಟ್ಟು ಮತ್ತೊಮ್ಮೆ ಹೇಳಿದ–ಅಹುದು, ನೀನೂ ಒಬ್ಬಳು ಸೀತೆ!

ಸೀತಾರಾಮರು ಮಹಡಿಯ ಮೆಟ್ಟಲಿಳಿದಾಗ ಗಂಟೆ ಎಂಟಕ್ಕೂ ಮಿಕ್ಕಿದ್ದಿತು. ಕೆಳಗಿಳಿದು ಶ್ರೀಧರನು ಸುತ್ತಲೂ ನೋಡಿ ನಗುತ್ತಾ ಕೇಳಿದನು—ಮನೆಯವರನ್ನೆಲ್ಲಾ ಏನು ಮಾಡಿಬಿಟ್ಟೆಯೇ?

ಆಕೆ ಒಮ್ಮೆ ಕಣ್ಣು ಹಾರಿಸಿ—ಅದೆಲ್ಲಾ ಹೆಂಗಸರ ಮಾಯೆ!

ಅವರನ್ನೇನು ಇಲಿ ಬೆಕ್ಕು ಮಾಡಿ ಬಿಟ್ಟೆಯ?

ಊಹೂಂ—ಹಾಗೇನಿಲ್ಲ, ಆದರೆ ಅವರನ್ನು ಪುಸಲಾಯಿಸಿ ದೇವಸ್ಥಾನಕ್ಕೆ ಕಳುಹಿಸಿದ್ದೇನೆ. ಅಲ್ಲಿ ಈ ದಿನ ಯಾರದ್ದೋ ಹರಿಕಥೆ.

ಆಗಲಿ. ಅಲ್ಲಿ ಅವರಿಗೆ ದೇವರು ಪ್ರತ್ಯಕ್ಷವೇ ಆದಾರು!—

ಇಲ್ಲಿ ನನಗೂ ಸಹ!

ಹೂಂ ಚಿಂತಿಲ್ಲ, ಬಹಳ ರಸಿಕಳು!

ನಾನೇನು ಮಹಾ! ಎಲ್ಲಾ ನಿಮ್ಮದೆ—ನಿಮ್ಮದೇ ಅನುಗ್ರಹ!

ಶ್ರೀಧರನು ಅವಳ ಕೈಹಿಡಿದು—ಹಾಗಾದರೆ ಗುರುದಕ್ಷಿಣೆ—

ಎಲ್ಲವೂ ನಿಮಗೇ ಅರ್ಪಿತ—ಎಂದು ಆಕೆ ಅವನ ಮೇಲೆನೇ ಮೈಭಾರ ಹೊಂದಿಸಿಬಿಟ್ಟಳು.

ಬಾಗಿಲು ತೆರೆಯುತ್ತ ಅಡ್ಡನಿಂತು ಅಂಬುಜಾಕ್ಷಿ ಕೇಳಿದಳು—ನಾಳೆ ರಾಮಾಯಣ ತಂದು ಮೇಜಿ ಮೇಲಿಡಲೆ?

ಬೇಡ, ಮಹಾಭಾರತವಾದೀತು!—

ಇಬ್ಬರೂ ತುಂಬಿದ ಹೃದಯದಿಂದ ನಕ್ಕರು. ಆ ನಗೆ ಭೂಲೋಕ ಮೀರಿ ಸ್ವರ್ಗದೊಡನೆ ಸೆಣಸಿದಂತಿದ್ದಿತು. ಹೆಜ್ಜೆ ಹೊರಗಿಡುತ್ತಾ ಶ್ರೀಧರ ಮೂರ್ತಿಯು ಒಮ್ಮೆ ತಡೆದು ನಿಂತು ತನ್ನ ಇರುವಿಕೆ ಈ ಊರಲ್ಲಿ ಬಹಳ ದಿನವಿಲ್ಲವೆಂದು ಹೇಳಿಬಿಡಬೇಕೆಂದು ಬಯಸಿದನು. ಕಾರಣ ಅವಳ ಸ್ನಿಗ್ಧ ಸಹವಾಸದಿಂದ ಅವನ ಅಂತರಂಗವು ಮೃದುವಾಗಿದ್ದಿತು. ಆ ವಿಷಯ ವನ್ನು ಅವಳಿಂದ ಅಡಗಿಸಿಡಬೇಕೆಂಬ ಅವನ ಹವಣಿಕೆಯು ಒಮ್ಮಿಂದೊ ಮ್ಮೆಗೆ ಋಜುವಾಗತೊಡಗಿತು. ಹಿಂದೆ ನಿಂತು ಮಾತಿಗಾಗಿ ತಡವರಿ ಸಿದನು. ಆದರೆ ಅದನ್ನು ಹೇಳಲಾಗಲಿಲ್ಲ. ರಸದೇವತೆಯಂತೆ ಬಾಗಿಲ ಬಳಿ ನಗುತ್ತ ನಿಂತಿದ್ದಳಾಕೆ. ಅಂತಹ ರಸನಿಮಿಷದಲ್ಲಿ ವಿಷಬೆರಸಲು ಅವನ ನಾಲಗೆ ತನಗ ತಾನೇ ಹಿಂಜರಿಯಿತು. ನಗುವ ನೋಟವಲ್ಲಿ ಅಳುವನ್ನು ಕಾಣಲು ಯಾರು ಸಮರ್ಥರು? ಅಂತಹ ಪ್ರಸಂಗವು ಯಾರಿಗೂ ಬಾರದಿರಲಿ—ಎಂದು ಆಶಿಸಿ ಆವನು ಮಾತು ತಿರುಗಿಸಿ ಕೇಳಿದನು—ಮತ್ತೆ ನಾಳೇನೂ ಮನೆಯವರನ್ನೆಲ್ಲಾ ಹೊರಗಟ್ಟುತ್ತೀಯಾ?

ತಮ್ಮ ಅಪ್ಪಣೆಯಾದರೆ—

ಅದೇನು ಕಾರಣ?

ಏನಿಲ್ಲ

ಮತ್ತೆ?

ಏನಿಲ್ಲ. ಅಮ್ಮನಿಗೆ ಇದೆಲ್ಲಾ ಇಷ್ಟ ಬರೋದಿಲ್ಲ—ಎಂದು ಗುಣು ಗುಟ್ಟಿದಳು.

ಹೇಗಾದರೂ ಅವಳಿಗೆ ಗೊತ್ತಾಗೋದಿಲ್ಲವೆ?

ಆಗ ನೋಡಿಕೊಂಡರೆ ಸಾಕಲ್ಲ!—ಎಂದು ಮುಖ ತಗ್ಗಿಸಿದಳು.

ಶ್ರೀಧರಮೂರ್ತಿ ಹೋಟೆಲು ಸೇರುವಾಗ ತನ್ನ ಆತ್ಮದ ಅವನತಿ ಅವನಿಗೇ ಗೋಚರವಾಗತೊಡಗಿತು. ಒಂದು ಕಡೆಯಿಂದ ತಾಯ ಮಹತ್ವಾ ಕಾಂಕ್ಷೆಗಳನ್ನು ಕಡೆಗಣಿಸಿ ಸ್ವಾತ್ತೆಯಿಂದ ಶಾಶ್ವತ ಸುಖಕ್ಕಾಗಿ ಚಾತಕ ದಂತೆ ಮೇಲೆ ನೀಕ್ಕರಿಸಿ ನಿಂತ ಅಂಬುಜಾಕ್ಷಿ; ಮತ್ತೊಂದೆಡೆ ವೃಥಾಭಿಮಾನ ದಿಂದ ಅಂತಹ ಅಭ್ಯುದಯದ ತಲೆಮೆಟ್ಟಿ ಸ್ವಾರ್ಥವನ್ನು ಮಾತ್ರ ಸಾಧಿಸಲೆ

ಕಸುವ ಮರಭಿಸಂಧಿಯ ತಾನು! ಇವರಲ್ಲಿ ಉಚ್ಚರಾರು—ನೀಚರಾರು? ಅವನು ತನ್ನ ಅಂತರಾತ್ಮನೊಡನೆಯೇ ಪ್ರಾರ್ಥಿಸಿಕೊಂಡನು–ಅಸತೋ ಮಾಂ ಸದ್ಗಮಯ!—

ಆ ರಾತ್ರಿಯೆಲ್ಲಾ ಅವನು ನಿದ್ದೆಗೆಟ್ಟು ಹೊರಳಾಡುತಿದ್ದನು. ಅಥವಾ ನಿದ್ದೆಯು ಕಣ್ಣರೆಪ್ಪೆಯೊಡನೆ ತುಸು ತೂಗಿತೆನುವಾಗ ಸೀತೆಯ ಕೈಕಾಲು ಕಟ್ಟಿ ಮಂಗಗಳು ಅಗ್ನಿಪರೀಕ್ಷೆಗಾಗಿ ನೂಕಿದಂತೆ ಕನಸುಕಂಡು ಒಡನೆಯೇ ಬಿಗಿಲುಬಿದ್ದು ಎಚ್ಚರಗೊಳುತಿದ್ದನು . ಅಯ್ಯೋ ಇದೆಂತಹ ಅಗ್ನಿಪರೀಕ್ಷೆ! ಚಿತ್ರಹಿಂಸೆ—ಚಿತ್ರಹಿಂಸೆ!—

ಬೆಳಿಗ್ಗೆ ಕಾಫಿಕುಡಿಯುವ ಹೊತ್ತಿಗೇನೇ ಆಫೀಸಿನ ಪೇದೆ ಬಂದು ಹೇಳಿದನು—ರಾಯರು ಹನ್ನೆರಡು ಗಂಟೆಯ ಬಸ್ಸಿಗೆ ಮಂಗಳೂರಿಗೆ ಹೋಗುತ್ತಾರೆ. ನೀವೂ ಹಾಗೇನೇ ಹೊರಟುಬರಬೇಕಂತೆ—

ಮತ್ತೆ?

ಮತ್ತೆ ಹಾಗೇನೇ ಮುಂದೆ

ಏನು ಈ ಹೊತ್ತೇ?

ಹೌದು. ಇದೇ ಮಧ್ಯಾಹ್ನ.

ಶ್ರೀಧರಮೂರ್ತಿ ತಲೆಹಿಡಿದುಕೊಂಡು ಸುತ್ತಲೂ ನೋಡಿದನು. ತಲೆ ತಿರುಗಿದಂತಿದ್ದಿತು. ಸುತ್ತಲೂ ಅಂಬುಜಾಕ್ಷಿಯ ಮುಖಕಾಣುತ್ತಿದ್ದಿತು. ಅವನತಿ–ಅಭ್ಯುದಯ ಈ ಪ್ರಶ್ನೆಗೆ ಇನ್ನೆಲ್ಲಿ ಅವಕಾಶವಿದೆ? ಇನ್ನು ಒಮ್ಮೆಗೇ ಹೋಗಿ ಅಂಬುಜಾಕ್ಷಿಯನ್ನು ಕಾಣಬೇಕೆ? ಕಂಡು ಏನು ಹೇಳಲಿ! ಇದು ಮನಃಪೂರ್ವಕವಾಗಿ ನಡೆಸಿದ ತಪ್ಪು! ಇದನ್ನು ಹೇಗೆ ತಿದ್ದಬೇಕು? ತಲೆ ಸುತ್ತಿದಂತೆಲ್ಲ ಅಪರಾಧದ ಗುರುತ್ವವು ಅವನ ತಲೆಯಮೇಲೆ ಬೊಳಕಾ ಲೊತ್ತಿ ನಿಂತಂತಿದ್ದಿತು. ಅಂಬುಜಾಕ್ಷಿಯ ದುಃಖದ ಬಿಸಿಯುಸಿರು ಅವನ ಹೃದಯಕ್ಕೆ ಹೊಯ್ದಂತಿದ್ದಿತು. ನೀನೂ ಒಬ್ಬಳು ಸೀತೆ—ಎಂದ ಅಂದಿನ ಮಾತು ಅವನನ್ನೆ ಅಣಕಿಸಿ ಹಲ್ಕಿರಿಯುತಿದ್ದಿತು! ಆದರೆ ಹೆಚ್ಚಿನ ವಿಚಾರಕ್ಕೆ ಅವಕಾಶವಿದ್ದಿಲ್ಲ. ಉಡುಗೆ ತೊಟ್ಟುಕೊಂಡು ಆಫೀಸರರ ಭೇಟಿಗೆಹೋದನು. ಮತ್ತೆ ಹೊರಡುವ ಸನ್ನಾಹದಿಂದ ವಸತಿಗೃಹದ ಲೆಕ್ಕಾಚಾರ ಮುಗಿಸಿದನು.

ಡೋಬಿಯ ಹಣ ಪಾವತಿ ಕೊಟ್ಟನು. ಎನುವಾಗಲೇ ಘಂಟೆ ಹನ್ನೊಂದು ತೀರಿದ್ದಿತು. ಮತ್ತೆ ಅವಸರದಿಂದ ಒಂದು ಪತ್ರವನ್ನು ಹತ್ತುತಡವೆ ತಿದ್ದಿ ತಿದ್ದಿ ಬರೆದು ಇದಿರು ಕೋಣೆಯ ವಿಮಾ ಏಜಂಟ ಮಹಾಶಯನ ಭೇಟಿ ತೆಗೆದುಕೊಂಡು—ಈ ಪತ್ರ ಈ ಜನಕ್ಕೆ ಸ್ವಲ್ಪ ತಲ್ಪಿಸಬಹುದೆ?—ಎಂದನು.

ಆತನು ಅದರ ವಿಳಾಸ ನೋಡಿ ಒಮ್ಮೆ ಕಣ್ಣು ಅರಳಿಸಿ ಮುಗುಳ್ನಗೆ ನಕ್ಕು—ಹೂಂ. ಚೆನ್ನಾಯಿತು! ಎಂದನು.

ಆದರೆ ಏನೆಂದರೂ ವಿಮಾ ಮನುಷ್ಯನ ಪ್ರಾಣವೇ ಪರೋಪಕಾರಕ್ಕೆ. ಹೆಚ್ಚೇಕೆ? ವಿಮಾ ಸಂಸ್ಥೆಗಳ ಉಪಕಾರದಿಂದಾಗಿ ಪ್ರತೀ ಮನೆಯ ಪಕ್ಕ ಕ್ಕೊಬ್ಬನಂತೆ ಇರುವ ವಿಮಾ ಏಜಂಟನಿಂದಾಗಿಯೇ ಇಂದಿನ ನೀರಸ—ರೂಕ್ಷ ಪ್ರಪಂಚದಲ್ಲಿ ಕೊಂಚವಾದರೂ ಸಾಮರಸ್ಯ ತುಂಬಿದೆ—ಎಂದರೆ ಈ ಮಾತನ್ನು ನಿಮ್ಮ ಶತ್ರುಗಳಾದರೂ ಒಪ್ಪಲಿಕ್ಕೇ ಬೇಕು! ಎಂದ ಮೇಲೆ ಅವನು ಅರ್ಥಗರ್ಭಿತವಾಗಿ ನಕ್ಕರೂ ಪತ್ರವನ್ನು ಕಿಸೆಯೊಳಗಿಟ್ಟುಕೊಂಡು ತಲೆತೂಗಿ—ಬಿಡು. ಇದರ ಯೋಚನೆಯೇ ಬಿಡು!—ಎಂದು ಬೆನ್ನುತಟ್ಟಿ—ತಮ್ಮಾ ಮತ್ತೇನಾದರೂ ಹೇಳಲಿಕ್ಕಿದೆಯೇ? ಎಂದನು.

ಮೂರ್ತಿಯು ಅಂತಹ ಸೌಜನ್ಯದಿಂದಾಗಿ ಕಂಪಿಸಿ ಮುಖತಗ್ಗಿಸಿ—ಏನಿಲ್ಲ.

ಸರಿ. ಪ್ರಪಂಚವೇ ಹಾಗೆ ನೋಡು! ಅಳಬೇಕು—ನಗಬೇಕು. ಇದು ತಿರುಗುವ ಗಾಲಿ! ಆದರೆ ಗಾಲಿಯ ಎಡೆಯಲ್ಲಿ ನುಚ್ಚುನೂರಾಗಬೇಡ! ಎಂದು ಕಣ್ಣೊರಸಲು ಕಿಸೆಯಿಂದ ಕರವಸ್ತ್ರವನ್ನು ತೆಗೆದುಕೊಟ್ಟನು.

ಶ್ರೀಧರಮೂರ್ತಿ ಮರುಮಾತಾಡದೆ ಸಾವಧಾನದಿಂದ—ಬರುತ್ತೇನಪ್ಪ—ಎಂದು ಕೈಕುಲುಕಿ ಕೆಳಗಿಳಿದನು. ಕೆಳಗಿಳಿದಾಗ ಜೀವನದ ಮೆಟ್ಟದಿಂದಲೇ ಒಂದು ಹೆಜ್ಜೆ ಕೆಳಗಿಳಿದಂತೆ ಭಾಸವಾಯಿತು!

## ಎಸಳು ೫ ಸಮಾಜದ ಸುಳಿಗುಂಡಿ

ಜೀವನವು ಸಮುದ್ರದ ಮೇಲಿದ್ದ ತೆರೆಯಂತೆ. ತೆರೆಯ ಮೇಲೆ ತೆರೆಯೆದ್ದು ಕಟ್ಟಕಡೆಗೆ ತಡಿಹೊಯ್ದು ಹುಟ್ಟಡಗುವಂತೆ ಸಂದರ್ಭದ ಮೇಲೆ ಸಂದರ್ಭವು ಕಲ್ಲೋಲವಾಗಿ ಕೊನೆಗೆ ಸದ್ದಡಗುವುದು. ಆಗ ಎರಡು ದಿನಗಳ ಆ ನೆನಪಿನಿಂದ ಮನಸ್ಸು ಕುದಿಕುದಿಯಲಿದೆ. ಆದರೂ ಜಾಗ್ರತಿಯ ಮೇಲಣ ಸುಷುಪ್ತಿಯಂತೆ ಹೃದಯವು ವಿಸ್ಮೃತಿಯ ಯೋಗನಿದ್ರೆಯಡರಿ ಮತ್ತೆ ಹೊಸತಾಗುವುದು. ಇಂತಹ ಪರಿವರ್ತನೆಯಿಂದಲೇ ಪ್ರಪಂಚವು ಬಾಳಿದೆ.

ಶ್ರೀಧರಮೂರ್ತಿಗೆ ಕೊಯಮುತ್ತೂರು ಸೇರುತ್ತಾ ಸೇರುತ್ತಾ ಕಾಳಿದಾಸನ ಕಲ್ಪನೆಯು ಅನುಭವವಾಗತೊಡಗಿತು—

ಧಾವತಿಪುರಃ ಶರೀರಂ ಪಶ್ಚಾದಸಂಸ್ಪೃತಂ ಚೇತಃ
ಚೀನಾಂಶುಕಮಿವಕೇತೋಃ ಪ್ರತಿವಾತಂ ನೀಯಮಾನಸ್ಯ

ಒಂದಿಗೆ ತಾನೂ ಒಬ್ಬ ದುಷ್ಯಂತನೇನು? ತನ್ನ ದುರ್ಮನಸ್ಸಿನ ವಿಷಬಿಂದುವನ್ನು ಆ ಕಡೆ ಸುರಿದು ಈ ಕಡೆ ಓಡುತ್ತಿರುವ ಖಳದುಷ್ಯಂತನೇನು? ಎಂಬ ಭಾವನೆಯು ಮನಮುಟ್ಟತೊಡಗಿತು. ತನ್ನ ಪತ್ರವನ್ನು ಕಂಡು ನಿರಾಶೆಯಿಂದ ಮುಂದುಗಾಣದೆ ಚಕೋರಿಯಂತೆ ಚೀರುವ ಅಂಬುಜಾಕ್ಷಿ—ತನ್ನ ಮನಸ್ಸಿನ ದಾರುಣಯಾತನೆ ಅಪಮಾನಗಳನ್ನು ತನ್ನಲ್ಲೇ ಬಚ್ಚಿಟ್ಟುಕೊಂಡು ಮರುಗುವ ಅಂಬುಜಾಕ್ಷಿ! ಆ ದೃಶ್ಯ ಅವನ ಹೃದಯವನ್ನು ಬೇಟೆಯಾಡತೊಡಗಿತು. ಆದರೆ ಜೀವನವು ಯಂತ್ರದಲ್ಲಿನ ಒಂದು ಚಿಕ್ಕ

ಕೀಲಿನಂತೆ. ಬೃಹದ್ವಿಶ್ವದ ಪರಿವರ್ತನೆಯಲ್ಲಿ ಅದು ಗೌಣವಾಗಿ ಹೆಸರು ಮಾಸಿಹೋಗುವುದು. ಆಗಲಾಗ ಶ್ರೀಧರಮೂರ್ತಿಯು ತಾನೇ ತಾನೇ ಆತ್ಮ ಸಮಾಧಾನಕ್ಕಾಗಿ ಯೋಚಿಸತೊಡಗಿದನು. ಈ ಸಂಸರ್ಗದ ಅವ ಸಾನವು ಇಲ್ಲಿಗೇ ಆಗದಿದ್ದರೆ ಇದರ ಪರಿಣಾಮವೇನು? ಎಂದಿನ ತನಕ ಮನುಷ್ಯತ್ವವು ಸಮಾಜದೊಡನೆ ಭುಜಕ್ಕೆ ಭುಜಕೊಟ್ಟು ಹೋರಾಡಲು ಬಯಸುವುದಿಲ್ಲವೊ ಅಂದಿನ ತನಕ ಅದು ವಿಧವೆಯಂತೆ ಮುಖ ಮುಚ್ಚಿರ ಬೇಕು. ಅದಕ್ಕೆ ವ್ಯಕ್ತಿ ಸ್ವಾತಂತ್ರ್ಯವಿಲ್ಲ. ಎಂದ ಮೇಲೆ ಹೂಡಿದ ಬಾಣವು ಅಲಕ್ಷ್ಯವಾದರೆ ಆ ಬಾಣವೇ ತನ್ನದಲ್ಲವೆಂದು ಬಿಡುವುದೇ ಲೋಕಸಮ್ಮತ. ಅದಕ್ಕಾಗಿ ಯೋಚಿಸಬೇಕಾಗಿಲ್ಲ— ಎನುವಾಗ ಅವನ ಆತ್ಮದ ದೌರ್ಜನ್ಯವು ಬೆರಳೆತ್ತಿ ಹೇಳಿತು—ಸೂಳೆಯ ಸ್ಥಾನಮಾನದ ವಿಚಾರವೇಕೆ? ಎಂದಿನ ತನಕ ಸೂಳೆಯ ಮಗಳು ಸಮಾಜದ ಮುಂದೆ ಸುಭಗಳಾಗಲು ಸಾಧ್ಯವಿ ಲ್ಲವೊ ಅಂದಿನ ತನಕ ಅದಕ್ಕಾಗಿ ಕಣ್ಣೀರು ಮಿಡುಕಬೇಕಾಗಿಲ್ಲ. ಲೋಕ ವನ್ನು ತಿದ್ದುವ ಹವ್ಯಾಸ ನಿನಗೆ ಬೇಡ. ಲೋಕದೊಳಗಿನ ತುಫಾನಿನ ತಿಮಿಂಗಿಲವು ನೀನಲ್ಲ—ಒಂದು ಬರೇ ಸಣ್ಣ ಮೀನು!

ಶ್ರೀಧರಮೂರ್ತಿಯು ಒಮ್ಮೆ ಉಸಿರುಬಿಟ್ಟು ಸಮುದ್ರದ ಸಣ್ಣ ಮೀನಿ ನಂತೆ ಕೊಯಮುತ್ತೂರಿನ ಸಾವಿರ ಜನಸಂದಣಿಯಲ್ಲಿ ಹುದುಗಿಹೋದನು.

ಹೆಂಗುಸಿನ ಮನಸ್ಸು ಗಂಡಸಿನಂತೆ ಗಡುಸಾಗಿರುವುದಿಲ್ಲ. ಅದು ಸ್ವಾಭಾವಿಕವಾಗಿ ಮೃದು. ಅದು ಒಮ್ಮೊಮ್ಮೆ ಕಠಿಣವಾಗುವುದಿದ್ದರೆ ಪುರುಷನ ಸಂಪರ್ಕದ ಆಘಾತಗಳಿಂದ ಮಾತ್ರ. ಹೂವನ್ನು ಹೂವಿನಂತೆ ಹಗುರಾಗಿ ಹಿಡಿಯದೆ ಹೋದರೆ ಅದು ಬಾಡಿ ಬಿದ್ದು ಹುಡಿಹುಡಿಯಾಗು ವುದು. ಹಾಗೆ ಬಾಡಿಬಿದ್ದ ಹೂವಿಗಾದರೂ ಒಂದು ಸ್ಥಾನವಿಲ್ಲವೆಂದವರಾರು? ಅದರ ಸ್ಥಾನವು ಅಂತಹ ಆಘಾತದ ಅಪಚಾರದ ದ್ರೋಹದಲ್ಲಿ ನಿರ್ಭರ ವಾಗಿದೆ.

ಆ ದಿನ ಸಂಜೆ ಅಂಬುಜಾಕ್ಷಿಯು ಶ್ರೀಧರಮೂರ್ತಿಗಾಗಿ ಬಾಗಿಲು ಕಾದು ನಿಂತಿರುವಾಗ ವಿಮಾ ಪ್ರತಿನಿಧಿಯು ಆ ಕಾಗದವನ್ನು ಕೈಯಲ್ಲಿ ಕೊಟ್ಟನು. ಅವಳ ಕಾತರ ದೃಷ್ಟಿಯನ್ನು ಕಂಡು ಅವನಿಗಾದರೂ ಕಾಗದ

ಕೊಡುವವೇಳೆ ಕೈನಡುಗದಿರಲಿಲ್ಲ. ಅದನ್ನು ತೆಗೆದು ಓದುವ ಮುಂಚಿತ ವಾಗಿ ಮೆಲ್ಲನೆ ಹೇಳಿದನು-ನೋಡು ಹುಡುಗಿ! ಇದು ಶ್ರೀಧರನ ಕಾಗದ.

ಅವಳು ಗಾಬರಿಯಿಂದ—ಅವರಿಗೆ ಏನಾಯಿತು ಏನಾಯಿತು? ಎಂದಳು.

ಏನೇನೂ ಆಗಲಿಲ್ಲ. ಆದರೆ ಕಾಗದ ತೆಗೆದುಕೊಳ್ಳು. ನಿನ್ನ ಕೋಣೆಗೆ ಹೋಗಿ ಓದಿನೋಡು. ಇಲ್ಲಿ ಬೇಡ.

ಅಂಬುಜಾಕ್ಷಿ ಚಿಗರೆಯಂತೆ ಹಾರಿ ಕೋಣೆ ಸೇರಿದಳು. ಎದೆಯ ದುಮಿಹಿಡಿದುಕೊಂಡು ಕಾಗದ ಓದಿದಳು. ಅದನ್ನು ಮುಗಿಸುವ ವೇಳೆಗೆ ತಲೆತಿರುಗ ತೊಡಗಿದ್ದಿತು. ಅಲ್ಲೇ ಬೆಪ್ಪಾಗಿ ಕುಳಿತುಬಿಟ್ಟಳು. ಸ್ವಲ್ಪ ಹೊತ್ತಿನ ಮೇಲೆ ಸುಧಾರಿಸಿಕೊಂಡು ಬಂದವನೊಡನೆ ಏನೋ ಕೇಳಬೇ ಕೆಂದೆಣಿಸಿ ಮುಖ ಮುಖ ನೋಡತೊಡಗಿದಳು. ಅವನು ಅವಳ ಅಭಿಪ್ರಾ ವನ್ನು ಗ್ರಹಿಸಿ ಹೇಳಿದನು—ತಂಗೀ! ಏನೂ ಸಂಕೋಚಪಡಬೇಡ. ನಾನು ಶ್ರೀಧರನ ದೋಸ್ತಿಯಾದುದರಿಂದಲೇ ಈ ಕೆಲಸವನ್ನು ವಹಿಸಿಕೊಂಡು ಬಂದಿದ್ದೇನೆ. ನಾನು ಪರಕೀಯನಲ್ಲವೆಂದೇ ಭಾವಿಸಿ ಮನಸ್ಸು ಬಿಚ್ಚಿ ಮಾತಾಡು. ದುಃಖ ಬಂದಾಗ ಬಾಯಿ ಮುಚ್ಚಿಕೊಳ್ಳಲಿಕ್ಕೆ ಬರುವುದಿಲ್ಲ. ಬುದ್ಧಿಯಿಲ್ಲದವರು ಅತ್ತು ಬಿಡುತ್ತಾರೆ. ಬುದ್ಧಿಯಿದ್ದವರು ತಾಳಿಕೊಂಡು ಸ್ನೇಹಿತನೊಡನೆ ಮನಸ್ಸು ತೋಡಿಕೊಳ್ಳುತ್ತಾರೆ.

ಆಕೆ ನಿರಾಶೆಯಿಂದ ನಿಟ್ಟುಸಿರುಬಿಟ್ಟು ಮೆಲ್ಲನೆ ಕೇಳಿದಳು—ಈ ಕಾಗದ ಅವರೇ ಕೊಟ್ಟರೆ?

ಹೌದು.

ನನ್ನ ಕೂಡೆ ಅವರು ಇದನ್ನು ತಿಳಿಸಲೇಯಿಲ್ಲ. ಗೊತ್ತಿದ್ದಿಲ್ಲವೋ ಏನೊ! ಮತ್ತೇನಾದರೂ ಹೇಳಿದರೆ?

ಏಜಂಟನು ತನ್ನ ಸ್ವಭಾವ ಸಹಜವಾದ ಸೂಕ್ಷ್ಮದೃಷ್ಟಿಯಿಂದ ಎಲ್ಲ ವನ್ನೂ ಅಳೆದು ನೋಡಿದನು. ನಿನ್ನೆ ನಿನ್ನೆ ಬಂದಿದ್ದ ಮನುಷ್ಯ ಇದನ್ನು ಈಕೆಗೆ ತಿಳಿಸಿಲ್ಲವೆಂದರೆ ಇದರಲ್ಲೇನೋ ಉದ್ದೇಶಪೂರ್ವಕವಾದ ಅಪಾರ್ಥ

ವಿದೆಯೆಂದು ನಿರ್ಧರಿಸಿದನು. ಆಗಲಾಗ ಅವನಿಗೆ ತನ್ನ ದೂತಭಾವದ ಗುರುತ್ವದ ಅರಿವಾಯಿತು. ಆದರೂ ಅದನ್ನು ಯಶಸ್ವಿಯಾಗಿ ಕೊನೆಮುಟ್ಟಿಸುವುದಕ್ಕಾಗಿ—ಪಾಪ! ಅವನಿಗೂ ಗೊತ್ತಿರಲಿಲ್ಲ. ಇವತ್ತೇ ಬೆಳಿಗ್ಗೆ ಆಫೀಸಿನಿಂದ ಜನಬಂದು ಕೂಡಲೇ ಹೊರಡಬೇಕೆಂದು ತಿಳಿಸಿತು. ಆಗ ಪಾಪ! ಅವನ ಗಲಿಬಿಲಿ ಅವನಿಗೇ ಗೊತ್ತು! ಕೊನೆಗೆ ನನ್ನ ಕೂಡೆ ಹೇಳಿದ.

ಏನು? ಏನು ಹೇಳಿದರು?—ಅವಳು ಕಾತರ ದೃಷ್ಟಿಯಿಂದ ಕೇಳಿದಳು.

ಈ ಕಾಗದವನ್ನು ನಿನಗೆ ತಲ್ಪಿಸಲಿಕ್ಕೆ ಹೇಳಿದ. ಅವನಿಗೆ ರೆಕ್ಕೆಯಿದ್ದಿದ್ದರೆ ಪಾಪ! ಈ ಕಡೆ ಹಾರಿಯಾದರೂ ಒಂದು ಕ್ಷಣ ಬಂದು ಹೋಗುತ್ತಿದ್ದನೋ ಏನೊ!

ಇಲ್ಲ. ಅವರು ಬರಲಿಲ್ಲ!—ಅದು ಅವಳ ಹೃದಯದ ನಿರಾಶೆಯ ಉದ್ಗಾರ. ಮತ್ತೊಮ್ಮೆ ಮುಖತಗ್ಗಿಸಿ ಹೇಳಿದಳು—ಬರಲೇಯಿಲ್ಲ!

ಏಜಂಟನು ಸಾಂತ್ವನೆಗಾಗಿ ಅವಳ ಸಮ್ಮುಖ ನಿಂತು ಸುಖದುಃಖಗಳನ್ನು ಅನುಭವಿಸಿ ಹೇಳಿದನು—ಇದಕ್ಕೆಲ್ಲಾ ದುಃಖಿಸಿ ಉಪಯೋಗವಿಲ್ಲ. ಎಲ್ಲದಕ್ಕೂ ಸಹನೆ ಬೇಕು. ಅವರೆಲ್ಲಾ ನೌಕರೀ ಜನರು, ನಿಂತಲ್ಲಿ ನಿಲ್ಲಲಿಕ್ಕೆ ಬರುವುದಿಲ್ಲ. ಮತ್ತೆ ಯಾವಾಗ ಬರುತ್ತಾನಂತೆ ಗೊತ್ತೆ?

ನೆಲ ನೋಡುತ್ತ ಅವಳು ಹೇಳಿದಳು—ಇಲ್ಲ; ಬರೆದಿಲ್ಲ!

ಸಹಜ, ನಾವು ಎಣಿಸಿದಂತೆ ಕೆಲಸಗಳು ಕೊನೆಗಾಣುವುದಿಲ್ಲ. ನಾಟಕದರೀತಿ ಸಂಸರ್ಗವು ಸುಖವಾಗಿ ತೊಡಗಿದುದು ದುಃಖವಾಗಿ ಪರ್ಯವಸಾನಗೊಳ್ಳುವುದು. ಮುಖ್ಯವಾಗಿ ಸುಖಕ್ಕಾಗಿ ಕಾಯಬೇಕು. ಕಾದೂ ಕಾದೂ ಮತ್ತೊಂದು ದಿನ ನಿರಾಶೆಗೊಳ್ಳುವ ಕಾಲವೂ ಬರಬಹುದು. ಅಥವಾ ಸುಖವು ಕೂಡುವವೇಳೆ ನಮ್ಮ ಕಾಯುವ ಬುದ್ಧಿಯು ಕಡಿಮೆಯಾಗಿ ದುಃಖವೇ ನಮ್ಮ ಪಾಲಿಗೆ ಬರಬಹುದು. ಅಂತೂ ಪ್ರೀತಿಯು ಒಂದು ಬೆಂಕಿಯುಮ್ಮ ಬೆಂಕಿ! ಅದರ ಕೂಡೆ ಆಡಿ ಕೈ ಸುಟ್ಟುಕೊಂಡರೆ ಅದಕ್ಕೆ ನಾವೇ ಜವಾಬ್ದಾರರು!

ಅಂಬುಜಾಕ್ಷಿಗೆ ಜೀವನದ ದಾರುಣಚಿತ್ರದ ಕಲ್ಪನೆಯಾಗತೊಡಗಿತು. ಆದರ್ಶದ ಮೈ ಎಣಿಸಿದಷ್ಟು ನುಣುಪಲ್ಲ. ಅದರ ಒರಟುತನ ಮೈಗೆ

ಕೂಡಿದಾಗಲೇ ಗೊತ್ತು. ಅವರ ರೇಖೆ ರೇಖೆಗಳಲ್ಲಿ ಸೌಂದರ್ಯದ ಸಿದ್ಧಾಂತ ಸೂತ್ರವಲ್ಲ—ಸ್ವಾರ್ಥದ ಅಪಸಿದ್ಧಾಂತವೂ ಹಾಸುಹೊಸೆದಿರುತ್ತದೆ. ಅವಳು ತಾನೇರಿದ ಉನ್ನತಿಯಿಂದ ಹತ್ತು ಮೆಟ್ಟಲು ಕೆಳಗುರುಳಿದಂತೆ ಭಾವಿಸಿದಳು. ಆದರೂ ಆಶೆಯು ಜೀವನದ ಸೂತ್ರಬಂಧದಂತೆ ಸ್ವರ್ಗ ನರಕಗಳಿಗೆ ಸೇತು ಬಿಗಿದಿರುತ್ತದೆ. ಬದುಕಿನ ಮಮತೆಯನ್ನು ಮೇಳೈಸಿ ದೂರ ದಿಗಂತದ ಕಡೆ ಬೆರಳು ತೋರಿಸಿ ಮನುಷ್ಯನನ್ನು ಅದೃಷ್ಟವಾದಿಯನ್ನಾಗಿ ಮಾಡುತ್ತದೆ. ಆ ಭರವಸೆಯಿಂದಲೇ ಅವಳು ಮೆಲ್ಲಮೆಲ್ಲನೆ ಗುಣುಗುಟ್ಟಿದಳು—ಹಾಗಾದರೆ ಅವರಿನ್ನು ಬರೋದಿಲ್ಲವೆ?

ಯಾಕೆ ಬರಲೊಲ್ಲರು? ಬಂದಾರಮ್ಮ. ಆದರೂ ನೋಡು! ಕಾಲವು ನಮ್ಮ ಅಧೀನವಿರುವುದಿಲ್ಲ. ನಾವು ಕತ್ತಲಲ್ಲಿ ನಿಂತಿರುವುದಕ್ಕಿಂತ ಬೆಳಕಿನಲ್ಲೇ ನಿಂತು ಏನನ್ನಾದರೂ ಸಾಧಿಸಬೇಕಾಗಿರುತ್ತದೆ. ಅಷ್ಟೆ.

ಅಂಬುಜಾಕ್ಷಿಯ ಕೈಯ ಪತ್ರವು ಕಣ್ಣೀರಿನಿಂದ ತೋಯುತಿದ್ದಂತೆ ವಿಮಾ ಏಜಂಟನು ಅಲ್ಲಿಂದ ಹೊರನುಸುಳಿದನು.

ದಿನಗಳ ಮೇಲೆ ದಿನಗಳು ಉರುಳಿ ಹೋದುವು. ಬೆಳಕಿನಿಂದ ಒಮ್ಮಿಂದೊಮ್ಮೆಗೆ ಕತ್ತಲಕಡೆ ಬಂದಾಗ ಕಣ್ಣು ಏನೇನೂ ಕಾಣಿಸುವಂತಿಲ್ಲ. ಆದರೆ ತುಸು ತಡೆದ ಮೇಲೆ ಅಂತಹ ಕಾಲಾತಿಪಾತದಿಂದಾಗಿ ಆ ಕತ್ತಲಲ್ಲೂ ಬದುಕನ್ನು ಕಾಣುವ ಶಕ್ತಿ ಕಣ್ಣಿಗೆ ಕೂಡಿಬರುತ್ತದೆ. ಅಂತೆಯೇ ಶ್ರೀಧರಮೂರ್ತಿಯು ಕೊಯಮುತ್ತೂರಲ್ಲಿನ ಆಫೀಸಿನ ಕೋಣೆಯಲ್ಲಿ ಕುಳಿತು ಮೆತ್ತೆವೊದಲಿಗೆ ನಿಟ್ಟುಸಿರು ಬಿಟ್ಟಿದ್ದರೆ ಅದೇ ಕೊನೆಗೆ ವಿರಳವಾಗಿ ಗಾಳಿಯತ್ತ ತೇಲಿಹೋಗಿದೆ. ಆಕಾಶದಲ್ಲಿ ಕವಿದು ಕಪ್ಪಿಟ್ಟ ಕಾರ್ಮೋಡವು ಕ್ರಮೇಣ ತೇಲಿತೇಲಿ ಮಾಯವಾಗುತ್ತ ಅಲ್ಲಿಯಲ್ಲಿ ಕೆಲವು ಸೆಳೆ ಮಿಂಚುಗಳನ್ನು ಸೂಡುವ ರೀತಿ ಅವನ ಹೃದಯದ ಕಾವು ವಿಯೋಗದಿಂದಾಗಿ ಕಡಿಮೆಯಾಗುತ್ತ ಕಟ್ಟಕಡೆಗೆ ಏನೋ ಏನೋ ಕೆಲನೆನಪುಗಳ ಪರಿವೇದನೆಯಿಂದಾಗಿ ಮಾತ್ರ ಕನವರಿಸುತಿದ್ದಿತು. ಅಂತಹ ಕನಸುಗಳು ಮಾತ್ರ ಅವನನ್ನು ಮತ್ತಷ್ಟು ಕಾರ್ಯತತ್ಪರನನ್ನಾಗಿ ಮಾಡುತಿದ್ದವು. ಕಾರಣ—ಪ್ರೀತಿಯ ಸಾಹಚರ್ಯವು ಮನುಷ್ಯನ ಜೀವನದ ಅಭಿಲಾಷೆಗಳನ್ನು

ಹೆಚ್ಚಿಸಿ ಅವನನ್ನು ಮಹಾತ್ವಾಕಾಂಕ್ಷಿಯನ್ನಾಗಿ ಮಾಡುವುದು. ಅಂತಹ ಸಾಹಚರ್ಯಕ್ಕೆ ಭಂಗವೊದಗಿದಾಗ ಅವನು ವಿಕಲನಾಗಿ ಕರ್ತವ್ಯ ಶೂನ್ಯನಾಗಬಹುದು. ಆದರೆ ಅಂತಹ ಭಂಗವು ಅಪರಿಹಾರ್ಯವೆಂಬ ಭಾವನೆಯು ದೃಢವಾದಾಗ ಅದಕ್ಕೂ ಮಿಕ್ಕಿದ ಪ್ರಾಪ್ತಿಯ ಪರಿಸ್ಫುರಣಕ್ಕಾಗಿ ಹೃದಯವು ನೀಳ್ಕರಿಸಿ ಅಭ್ಯುದಯಪಥದತ್ತ ಕಡೆ ಮುಂದೋಡುವುದು. ಹಿಂದಿನ ಸುಖವು ಕ್ಷಣಿಕವಾದರೂ ಸುಪ್ತಚೇತನವನ್ನೊಮ್ಮೆ ಹೊಡೆದೆಬ್ಬಿಸಿ ಅದರ ಚಿತ್ರಜ್ಞೆಗಳಲ್ಲಿ ಆವೇಶದ ಅಲೆಗಳನ್ನು ಅದು ಕೆದರಿಸುವುದು. ಹೀಗೆ ಪರಾಸ್ತವಾದ ಬದುಕು ಪುನರುತ್ಥಾನಕ್ಕಾಗಿ ಸಿಡಿಯುವಂತೆ ಮನುಷ್ಯನ ಚೇತಃ ಪ್ರಣಾಲಿಯು ಉನ್ಮುಖವಾಗಿ ಮನಸ್ಸನ್ನು ಸೆಟೆಗೊಂಡು ಮುಂದೆ ತುರುಬುವುದು. ಅದೇ ಕ್ರಿಯೆಯ ಮೇಲಣ ಪ್ರತಿಕ್ರಿಯೆಯು!

ಶ್ರೀಧರಮೂರ್ತಿಯು ಒಂದು ವರ್ಷದಕಾಲ ಕೊಯಮುತ್ತೂರಿನ ಆಫೀಸಿನಲ್ಲಿ ಮುಖ್ಯಕಾರಕೂನನಾಗಿ ಕೆಲಸ ನಿರ್ವಹಿಸಿದನು. ಮೇಲಿನ ಎರಡು ವರ್ಷ ತಿನ್ನವೆಲ್ಲಿಯ ಆಫೀಸಿಗೆ ವರ್ಗಾಯಿಸಲ್ಪಟ್ಟನು. ಮತ್ತೆ ಅವನಿಗೆ ರೆವಿನ್ಯೂ-ಇನ್ಸ್ಪೆಕ್ಟರ ಕೆಲಸಕ್ಕೆ ಬಡ್ತಿಯಾಯಿತು. ಹಾಗೆ ಮಧುರೆಯಲ್ಲಿದ್ದ ಸಮಯ ಅಲ್ಲಿಯ ಗಣನೀಯ ಹೋಟೆಲು ಮಾಲಕರೊಬ್ಬರ ಮಗಳೊಡನೆ ಅವನ ವಿವಾಹವು ನಡೆಯಿತು. ಆ ಮದುವೆಯಿಂದಾಗಿ ಅವನ ಆರ್ಥಿಕ ಪರಿಸ್ಥಿತಿಯ ಅಂತಸ್ತು ಒಂದು ಮಟ್ಟ ಮೇಲೇರಿದಂತಾಯಿತು.

ಶ್ರೀಧರನ ಜೀವನವಿಂದು ಯಶಸ್ವಿ. ದಾರಿದ್ರ್ಯದ ದುಃಖದಲ್ಲಿ ತೊಡಗಿದ ಬಾಳು ಸುಖಮಯವಾಗಿ ಮುನ್ನಡೆದಿದೆ. ತನ್ನ ಏಳ್ಗೆಗಾಗಿ ತಾನೇ ಹೋರಾಡಿದ ಸಾಹಸವವನದು. ವಿದ್ಯೆಗಾಗಿ ಬೇಡಿ ನೌಕರಿಯೊಡನೆ ಹೆಣಗಾಡಿ ಜೀವನದೊಡನೆ ಹೋರಾಡಿ ಇಂದು ಸ್ವಯಂ ವ್ಯಕ್ತಿಯಾಗಿ ಸಂಸಾರವಂತನಾದ ಸಾಹಸವವನದು. ಬೇಕಾದಷ್ಟು ವಿದ್ಯೆ—ಚಿಕ್ಕದಾದರೂ ಭವಿಷ್ಯವುಳ್ಳ ನೌಕರಿ ಮತ್ತೆ ಕೈಹಿಡಿದು ನಿಂತಿರುವ ಶ್ರೀಮಂತರ ಸ್ಫುರದ್ರೂಪದ ಹುಡುಗಿ—ಇವುಗಳ ಸಿದ್ಧಿಯಿಂದಾಗಿ ಅವನ ಹೋರಾಟವು ಫಲಿಸಿದೆ.

ಅಹುದು; ಫಲಿಸಿದೆ. ಮೇಲಿನ ಶುಭ ವರ್ಷದಲ್ಲಿ ಅವನು ಮಗನ ಮುಖವನ್ನು ಕಂಡನು.

ಅದು ಅವನು ಕಂಡ ಮುಖ. ಕಾಣದಿರುವ ಮುಖವೊಂದು ಈ ಕಡೆ ಮಿದೆಯಲ್ಲ? ಅಂಬುಜಾಕ್ಷಿಯು ಮೊದಲಿನ ಅಂತೆಯೇ ಕೊನೆಯದೂ ಆದ ಅವನ ಅಂದಿನ ಪತ್ರವನ್ನು ಆಗಿಂದಾಗ ತೆರೆದು ನೋಡುವುದಿದೆ. ಅದು ವಿಸ್ಮೃತ ಪೂರ್ವದ ಅಂತರಾಳದೆಡೆಗೆ ಹಣಕಿದ ರೀತಿ. ಬಂಧನದಿಂದ ಚೇತೋವನಿಗೆ ಜಿಗಿಯಲೆಳಸಿದ ಪ್ರಥಮ ಪ್ರಯತ್ನದೆಡೆಗೆ ಸೋತ ಬದುಕು ಹಿಂತಿರುಗಿ ನೋಡಿದ ರೀತಿ! ಆದರ್ಶವು ಅವಳ ಕೈಯಿಂದ ನುಸುಳಿ ಹೋಗಿದೆ. ಧ್ಯೇಯಚಿಂತನೆಯು ವೃಥಾನುಸರಣೆಯಾಗಿ ಅಪಹಾಸ್ಯಕ್ಕೆ ಕಾರಣವಾಗಿದೆ. ಎಷ್ಟು ದಿನ ಅವಳು ತಾಯಿಯ ಕೋಪಕ್ಕೆ ಗುರಿಯಾಗಿಲ್ಲ! ಆದರೆ ಅದರ ಪ್ರತಿಫಲವೇನು? ಪರಿತಾಪ ಮಾತ್ರ!

ಅದೇನು? ಉದ್ಧಾರವು ಆತ್ಮನನ್ನು ಹೊಂದಿಲ್ಲವೆ? ಇಚ್ಛೆಯಿಂದ ಮನುಷ್ಯನು ತನ್ನ ಅಧಃಪತನದಿಂದ ಮೇಲೆದ್ದು ಬರಲಾರನೆ? ಎಂದ ಮೇಲೆ ಆತ್ಮದ ಅಭ್ಯುದಯಕ್ಕಾಗಿ ಸ್ವಪ್ರಯತ್ನವೇ ನಿರರ್ಥಕ. ಹರಿವ ಹೊಳೆಯಲ್ಲಿ ಹುಲ್ಲಿನ ಕಡ್ಡಿಯೊಂದು ಪ್ರವಾಹದೊಡನೆ ತೇಲುತ್ತ ತೇಲುತ್ತ ಹೋಗುತ್ತಿರು ವಂತೆ ಮನುಷ್ಯನು ಜಡನಾಗಿ ಮೂಕನಾಗಿ ಸಮಾಜವನ್ನು ಅನುಸರಿಸಲೇ ಬೇಕು. ಅವನ ವೈಯಕ್ತಿಕ ಅಭಿಪ್ರಾಯಕ್ಕೆ ಅಲ್ಲಿ ಬೆಲೆಯಿಲ್ಲ. ಸಮಾಜದ ನಿರ್ಮಾಪಕರು ನಾವೇ! ಆದರೆ ಕಟ್ಟಕಡೆಗೆ ಅಂತಹ ಸಮಾಜದ ನಿರ್ದಯ ವಾದ ಸವಾರಿಯು ನಮ್ಮ ಹೆಗಲಮೇಲೆಯೇ ನಡೆದಿದೆ!

ಅಂಬುಜಾಕ್ಷಿಯು ಅಂತಹ ಆದರ್ಶಕ್ಕಾಗಿ ಹಾತೊರೆಯುತ್ತಿದ್ದಳು. ತಾಯೊಡನೆ ಸೆಟೆಗೊಂಡಳು. ಪ್ರಿಯತಮನೊಡನೆ ಕೂಡಿದಳು. ಅಗಲಿ ದಳು. ಬಸುರಿಯಾದಳು. ತಾಯ ಅಪಹಾಸ್ಯಕ್ಕೆ ಗುರಿಯಾದಳು. ಮತ್ತೆ ಹೆತ್ತಳು!

ಹೆತ್ತುದು ಗಂಡು ಕೂಸು.

ಇವೆಲ್ಲವುಗಳ ತುಲನೆಯೊಂದಿಗೆ ಅವಳು ಆ ಪತ್ರವನ್ನು ಹಿಡಿದು ಸುಮ್ಮನೆ ನಿಂತಿರುವುದಿದೆ. ಅದು ಶ್ರೀಧರನ ಅಂದಿನ ಪತ್ರ ಮಾತ್ರವಲ್ಲ— ಈ ಎಲ್ಲಾ ಸನ್ನಿವೇಶಗಳ ರಕ್ಷಾಪತ್ರ! ಆ ಕೂಸಿನ ಜನ್ಮ ಪತ್ರ! ಆದರೆ ಆ ಪತ್ರವೊಂದು ಅವಳನ್ನು ಜೀವನಪತ್ತ ಸುಗಮವಾಗಿ ಸಾಗಿಸುವಂತಿಲ್ಲ.

ಮುನ್ನಡೆಯಿಸಿ ಅವಳನ್ನು ಸುಭಗಳನ್ನಾಗಿ ಮಾಡಿ ನೈತಿಕ ಬೆಂಬಲವೀಯುವಂತಿಲ್ಲ. ಎರಡು ದಿನ ಕೂಡಿ ಎತ್ತಲೋ ಹೊರಟು ಹೋದಾತ ಅವಳ ಸಂತಾನದ ಸಚ್ಚರಿತ್ರೆಗೆ ಪಿತೃಸ್ಥಾನದ ಬೆಂಗಾವಲಾಗಿ ಬರುವಂತಿಲ್ಲ. ಕಾರಣ ಅವಳ ಸತ್ಕರ್ಮಗಳಿಗೆ ಸಮಾಜದ ಸಮ್ಮತಿಯಿಲ್ಲ. ಪುಣ್ಯದ ಆಶ್ವಾಸನೆಯಿಲ್ಲ—ಆಚ್ಛಾದನೆಯಿಲ್ಲ. ಆದುದರಿಂದಲೇ ಅವಳು ಗರತಿಯರ ಮೇಲ್ಮಟ್ಟಕ್ಕೆ ಅಪವಿತ್ರಳಾದ ಸೂಳೆ. ಅವಳು ಸೂಳೆಯ ಮಗಳು. ಎಂದಿಗೂ ಸೂಳೆಯೆ. ಅವಳ ಸಂತಾನವೂ ಸೂಳೆಯ ಸಂತಾನ. ಪುಣ್ಯದ ತಳಹದಿಯಿಂದ ಅಭದ್ರವಾಗಿ ಕಳಚಿಬಿದ್ದ ಪಾಪ ಸಂತಾನ!

ಸೂಕ್ಷ್ಮವಾಗಿ ನೋಡಿದರೆ ಸಮಾಜದಲ್ಲಿ ಯಾರು ಸೂಳೆಯಲ್ಲ? ಪ್ರಪಂಚದಲ್ಲಿ ಪ್ರೇಮವು ಯಾರಯಾರೊಡನೆ ಚದುರಂಗವಾಡಿದೆಯೋ ಅವರೆಲ್ಲರೂ ಸೂಳೆಯರು! ನೀವು ನೀವೇ ಒಮ್ಮೊಮ್ಮೆ ಕತ್ತಲಿನ ಕೀಕ್ತನದ ಆಖಾತದೆಡೆಗೆ ಹಣಕುವ ನಕ್ಷತ್ರಗಳಂತೆ ನಿಮ್ಮ ಹೃದಯದೆಡೆಗೆ ಹಣಕಿ ನೋಡಿಕೊಳ್ಳಿರಿ. ಅಲ್ಲಿಯ ನೋಟ ಎಂದೂ ಸುಂದರವಾಗಿಲ್ಲ; ಮಂಗಳವಾಗಿಲ್ಲ! ಅಪ್ರಬುದ್ಧರಾಗಿ ಶಾಲೆಗೆ ಹೋಗುವ ವೇಳೆ ಯಾರೊಡನೆಯೋ ಗುಪ್ತ ಪ್ರಣಯವಿರಿಸಿ ಕಟ್ಟಕಡೆಗೆ ಮತ್ತೊಬ್ಬನಿಗೆ ಹಣಕ್ಕಾಗಿ ಹೃದಯವನ್ನು ಮಾರಿದುದಿದೆಯೆ? ಹೀಗೆ ನೀತಿಯ ನೆಲೆಗಟ್ಟು ಭದ್ರವಾಯಿತೆಂದ ಮೇಲೆ ಅನೈತಿಕದ ಉದ್ವೇಗದ ಕರೆಗೆ ಓಗೊಂಡುದಿದೆಯೆ? ಸಮಾಜದ ತೆರೆ ಮುಸುಕಿನ ಹಿಂದೆ ಅಕ್ರಮದೊಡನೆ ಪಿಸುಮಾತಾಡಿ ಅಕರ್ಮದೊಡನೆ ಕೈಕೂಡಿ ಅಧರ್ಮದೊಡನೆ ಸಂಪರ್ಕವಿರಿಸಿದುದಿದೆಯೆ? ಸಮಾಜದ ಕಾಳಗರ್ಭದಲ್ಲಿ ಇದಾವುದೂ ಕಾಣಿಸುವಂತಿಲ್ಲ. ಚಿನ್ನ ಸೀರೆಗಾಗಿ ಗಂಡನೊಡನೆ ಕಾದಿದ ಪತಿವ್ರತೆ—ಆತ್ಮಸುಖಕ್ಕಾಗಿ ಶೀಲಗೋತ್ರದೊಡನೆ ಹೋರಾಡಿದ ನಿತ್ಯಪಾವನೆ—ಮುಚ್ಚುಮರೆಯಲ್ಲಿ ಮೆಚ್ಚುಗೆಗಾಗಿ ಕ್ಷಣನಿಂತು ಸೈಗರೆದ ಸತ್ಯಸಂಧೆ—ಇವರೆಲ್ಲರನ್ನೂ ಸಮಾಜವು ಕಣ್ಣುಮುಚ್ಚಿ ಸಹಿಸಿದೆ. ಸಹಿಸದಿದ್ದರೆ ಪಾಪ! ಮತ್ತೆಲ್ಲಿದೆ ಈ ಸಮಾಜ?

ಆಶೆಯು ನಿರಾಶೆಗೆ ಸಂದು ನಿರ್ನಾಮವಾಗುವ ತನಕವೂ ಅಂಬುಜಾಕ್ಷಿಯು ಆದರ್ಶಕ್ಕಾಗಿ ಕಾದಿದ್ದಳು. ತನ್ನ ತಾಯ ಚುಚ್ಚು ನುಡಿ

ಯೊಂದಿಗೆ ಹಣವೂ ತೀರುವನಕವೂ ಅವಳು ಕಾದಿದ್ದಳು. ಆದರೆ ಇದ ರಿಂದಾಗಿ ಹೊಟ್ಟೆ ತುಂಬುವಂತಿಲ್ಲ. ಮಗು ಬೆಳೆಯುವಂತಿಲ್ಲ. ಆದರ್ಶ ದವರಿಗೆ ಉದ್ಯೋಗವೂ ಸಿಗುವಂತಿಲ್ಲ. ಮಾಲಕನ ನಗೆಯೊಂದಿಗೆ ನಗೆ ಗೂಡಿಸಿ ಕೈ ಹಿಸುಕಿದರೇನೇ ಉದ್ಯೋಗವು ಸಿಗಬಲ್ಲುದೇ ಹೊರತು ಆದರ್ಶವೆಂದು ಮುಖಮುದುರಿಸಿಕೊಂಡರೆ ಅಂತಹ ಉದ್ಯೋಗವೂ ಹಸನ್ಮು ಖಿಯರ ಪಾಲಿಗೇ ಸಂದಾಯವಾದೀತು. ಆದರ್ಶವು ಕೈಗೂಡದಿದ್ದರೆ ಅದರ ಅಸಾಫಲ್ಯವು ಅಭ್ಯುದಯವಲ್ಲ--ಅವನತಿ! ಹಣವನ್ನು ತೂಗಿನೋಡುವ ತಕ್ಕಡಿಯಲ್ಲಿ ಸತ್ಯವು ಸುಳ್ಳಿನಿಂದ ಬಹಳ ಭಿನ್ನವಾಗಿಲ್ಲ. ಸತ್ಯವು ಪ್ರಾದೇ ಶಿಕ--ಸಂಪ್ರದಾಯ ಮಾತ್ರ. ಸತ್ಯಕ್ಕಾಗಿ ಶೀಲದ ಮರ್ಯಾದೆಯನ್ನು ಅತಿಕ್ರಮಿಸಿದೆನೆಂದರೆ ಅದನ್ನಾರೂ ನಂಬುವಂತಿಲ್ಲ. ಅದುದರಿಂದ ಅಂತಹ ಸುಸಂಸ್ಕೃತಿಯು ಇಳಿಮುಖವಾಗಿ ಅಸಂಸ್ಕೃತಿಯೊಡನೆ ಕೂಡಲೇ ಬೇಕಾ ಗುವುದು. ಇದೇ ಜೀವನದ ಪ್ರಣಾಲಿ!

ಕಟ್ಟಕಡೆಗೆ ಅಂಬುಜಾಕ್ಷಿಯು ಅಸಂಸ್ಕಾರದೊಡನೆ ಕೈಗೂಡಿದಳು. ಅದಕ್ಕಾಗಿ ಹೇಸಿ ಹೇಸಿ ಮನಸ್ಸೊಗ್ಗದೆ ಕೈಕೂಡಿದಳು. ಆದರೆ ಜೀವನ ಸಂಗ್ರಾಮದಲ್ಲಿ ಹೇಸುವುದೇನಿದೆ? ಹೊಲಸು ಕಲಸಿನ ಬಾಳಿನಲ್ಲಿ ಸಂಸ್ಕಾರವು ಸಾಕುಸಾಕಾಗಿದೆ. ಹಣವು ಬೇಕು--ಹಣ! ಯಾರ ಕಿಸೆಯು ತುಂಬಿದೆಯೋ ಅದೇ ಅಂದಿನ ಆದರ್ಶವವಳದು. ಹಣದ ಕಿಣಿಕಿಣಿ ಸದ್ದೇ ಕಾಮನೆಯ ಕೈವಲ್ಯ. ಅದರಲ್ಲೇ ದಾನ, ಧರ್ಮ, ತ್ಯಾಗ, ತಪಸ್ಸು ಎಲ್ಲವನ್ನೂ ಕಂಡು ಕೊಂಡಳು ಆ ಮಾತಾಯಿ!

ನಾಲ್ಕೇ ವರ್ಷಗಳಲ್ಲಿ ಅಂಬುಜಾಕ್ಷಿಯು ಸಮಾಜದ ಸುಳಿಗುಂಡಿ ಯಾದಳು. ಈ ಸಮಾಜದ ಮೇಲೆ ಅವಳಿಗೆಷ್ಟು ತಾತ್ಸಾರವಿದೆಯೋ ಅಷ್ಟೇ ಪ್ರಬಲವಾಗಿ ಹೊಯ್ದು ಅದರ ಎಳೆಯೆಳೆಗಳ ರಚನೆಯನ್ನು ಹರಿದಿಕ್ಕ ತೊಡಗಿದಳು. ಒಬ್ಬ ಧಾರ್ಮಿಕ ಗುರುವಿನ ಅಧಃಪಾತವಾಗಿದ್ದರೆ ಅದು ಅವಳ ಮೋಹ! ಒಬ್ಬ ನವಯೌವನದ ಶ್ರೀಮಂತನು ಮನೆಬಿಟ್ಟಿದ್ದರೆ ಅದು ಅವಳದಾಹ! ಒಬ್ಬ ಸುಖೀ ಸಂಸಾರಿಯು ಪಾಡುಪಟ್ಟಾಗಿದ್ದರೆ ಅದು ಅವಳ ಆದೇಶ! ಸಂಸಾರದ ಮನೆ ಮನೆಗಳಲ್ಲಿ ಅವಳ ಅಭಿಶಾಪವು ಅವ್ಯತ

ವಾಗಿದೆ. ಆಕ್ರೋಶವು ಉದ್ದೀಪ್ತವಾಗಿದೆ. ಚಿಕ್ಕವರೇನು ದೊಡ್ಡವರೇನು ಸುಧಾರಕರೇನು? ಯಾರ ಸುಸ್ಥಿತಿಯೂ ಅವಳ ಮುಂದೆ ಸುಕರವಾಗಿಲ್ಲ. ಅವಳನ್ನು ಸಮಾಜದ ಹಡಗಿನ ಮೇಲಣ ಅಪ್ರತಿಹತವಾದ ಧಾಳಿಯ ಜಲಾಂತರ್ಗಾಮಿಯಾಗಿ ಭಾವಿಸಿತು ಪ್ರಪಂಚ!

ಆಗ ತಾನೇ ಪ್ರಪಂಚದ ಎರಡನೇ ಮಹಾಯುದ್ಧವು ತೊಡಗಿತ್ತು. ದೇಶ ದೇಶಗಳು ಉರುಳಿದುವು. ರಾಜರಾಜರು ದಿಕ್ಕು ಪಾಲಾದರು— ಎಂದಾಗ ಊರವರು ಹೊಸ ವಿಜ್ಞಾನದ ಸೃಷ್ಟಿಯನ್ನು ಕಂಡುಕೊಂಡರು. ಅವಳ ಮೋಹದ ಸಿಡಿಮದ್ದು–ರಾತ್ರಿನ ಆಕಾಶಯಾನ—ಮಮತೆಯ ಒಳಸಂಚು—ಕಣ್ಣೋಟದ V೨—ಸಂಪರ್ಕದ ಮಿಂಚಿನದಾಳಿ—ಸುಖದ ಸರ್ವತಂತ್ರಾಧಿಪತ್ಯ! ಆದರೆ ಇವುಗಳೆಲ್ಲವನ್ನು ಮೀರಿ ಆಕೆ ಒಳಗೊಳಗೇ ನಗುತಿದ್ದಳು; ಸಂತೋಷ ಪಡುತಿದ್ದಳು. ನಗದಿರುವುದಿದ್ದರೆ—ಅಸಂತುಷ್ಟಳಾಗುವುದಿದ್ದರೆ ಅದು ಅಂದಿನ ಆ ಕಾಗದವನ್ನು ಕಂಡಾಗ ಮಾತ್ರ! ಅದನ್ನು ಅವಳು ತನ್ನ ಕಳಂಕಿತವಾದ ಕೈಯಿಂದ ಮುಟ್ಟಲೇ ಅಂಜುತಿದ್ದಳು. ಉರಿಬಿಸಿಲಿನ ಪೂರ್ವಭಾವಿಯಾದ ನಿರ್ಮಲವಾದ ಪ್ರಭಾತದಂತೆ ಅದು ಎಂದೆಂದಿಗೂ ಪವಿತ್ರವೋ ಏನೋ! ಅಂತೆಯೇ ಅವಳ ಆ ಹುಡುಗ. ಮೇಲೆ ಹೆತ್ತ ಎರಡು ಸಂತಾನದಲ್ಲಿ ಅವಳಿಗೆ ಗೌರವವಿಲ್ಲವಾದರೆ ಆ ಹುಡುಗನನ್ನು ಅವಳೆಂದೂ ಆ ದೃಷ್ಟಿಯಿಂದ ಕಂಡುದಿಲ್ಲ. ಸಕಾಲದಲ್ಲಿ ಅವನನ್ನು ಶಾಲೆಗೆ ಸೇರಿಸಿದಳು. ಅವನ ಅಭ್ಯುದಯದಲ್ಲಿ ವಿಶೇಷವಾದ ಹೊಣೆಯಿದೆಯೆಂದು ನಿತ್ಯವೂ ಭಾವಿಸುತಿದ್ದಳು. ಕಾರಣ—ಅದು ಅವಳ ಆದರ್ಶದ ಪ್ರತೀಕ ಮಾತ್ರವಲ್ಲ, ಅವನ ಪ್ರತಿಬಿಂಬ. ಪ್ರತಿಮೆಯನ್ನು ಗುಡಿಕಟ್ಟಿ ಪೂಜಿಸುವುದಿದೆಯಲ್ಲ–ಇದೂ ಅಂತೆಯೇ!

## ಎಸಳು ೬ ಬದುಕಿನ ಬಂಡಾಯ

ಎಂಟು ವರ್ಷಗಳ ಮೇಲೆ ಶ್ರೀಧರಮೂರ್ತಿಯು ಇದೇ ಊರಿಗೆ ವರ್ಗಗೊಂಡು ಮೆಜಿಸ್ಟ್ರೇಟನಾಗಿ ಬಂದು ಅಧಿಕಾರ ಪೀಠವೇರಿದನು. ಕಚೇರಿಯಿಂದ ಅನತಿದೂರದಲ್ಲೇ ಬಿಡಾರ ಹಿಡಿದು ಮೇಲಿನ ತಿಂಗಳಲ್ಲೇ ಸಂಸಾರವನ್ನು ಕರೆದುಕೊಂಡು ಬಂದನು. ಸಂಸಾರವೇನು? ನಾಲ್ಕು ವರ್ಷದ ಒಬ್ಬ ಮಗ. ಮೇಲಿನದೊಂದು ಎರಡು ವರ್ಷದ ಹುಡುಗಿ. ಅವನ ಹೆಂಡತಿ; ಒಬ್ಬ ಆಳು ಮಗ--ಇಷ್ಟೆ. ಮತ್ತೆ ಆಕಡೆ ಈಕಡೆ ಓಡಾಡಲು ದಫೇದಾರನಿರುವನು. ಗುಮಾಸ್ತನಿರುವನು. ಅದು ಹುದ್ದೆಯ ಮರ್ಯಾದೆ. ಎಲ್ಲರಂತೆ ಅವನೂ ಆ ಹುದ್ದೆಯ ಗೌರವವನ್ನು ಕಾದು ಅವರಿಂದ ಯಥಾನುಶಕ್ತಿ ಸೇವೆಯನ್ನು ಅನಿವಾರ್ಯವಾಗಿ ಕೈಗೊಳ್ಳಲೇ ಬೇಕು ತಾನೆ!

ಈ ಊರಲ್ಲಿ ಅವನ ಜೀವನವು ರೀತಿಯಿಂದ ಸಾಗಿದೆ. ಶ್ರೀಧರ ಮೂರ್ತಿಯು ಅತಿಯಾಗಿಲ್ಲವಾದರೂ ಮಿತವಾಗಿ ಎಲ್ಲರ ಮೆಚ್ಚುಗೆ-ಆದರಕ್ಕೆ ಪಾತ್ರನಾದನು. ಅದೂ ಯುದ್ಧ ಕಾಲದಲ್ಲಿ ಹೊಸ ಹೊಸ ಓರ್ಡಿನೆನ್ಸುಗಳ ಕಾಲದಲ್ಲಿ ಅಧಿಕಾರಿಗಳ ಅಧಿಕಾರದ ಸೀಮೆಯು ಮತ್ತೂ ವಿಸ್ತಾರವಾಗಿದೆ. ಅದರಲ್ಲೂ ಅವನು ಎಂದೂ ಶಿಸ್ತುಭಂಗಗೊಂಡವನಲ್ಲ. ಮುಷ್ಟಿಯನ್ನು ಸಡಿಲು ಬಿಟ್ಟವನಲ್ಲ. ಅಂತೆಯೇ ಅವನ ನೆಲೆ ನಿಗೂಢವಾಗಿಯೆ ಇದ್ದಿತು. ಅದೇ ಗೌರವದ ದಾಟಿ—ಶ್ರೀಮಂತಿಕೆ!

ಅವನ ಸಂಸಾರದಲ್ಲಿ ಮತ್ತೇನು ಕೊರತೆಯಿದೆ? ದುಃಖವಲ್ಲೇ ಹುಟ್ಟಿ ಬೆಳೆದ ಅವನ ಬಾಳು ಸಂಸಾರವನ್ನು ಹೇಗೂ ಸುಗಮವಾಗಿ ಹೊಂದಿಸಿ

ಕೊಂಡು ಹೋಗುತ್ತಿದ್ದಿತು. ಅವನ ಹೆಂಡತಿ ಕೊಂಚ ಕೊಂಡಾಟದಲ್ಲಿ ಬೆಳೆದ ಸಿಡುಕಿನ ಸ್ವಭಾವದವಳು. ಆದರೂ ಅವಳು ಸದಾ ಪತಿಪ್ರಿಯೆ. ಅವಳ ಹೃದಯದಲ್ಲಿ ಅಸೂಯೆಯು ಕಲಕುವುದಿದ್ದರೆ ಅದು ಗಂಡನ ಹಿತಕ್ಕಾಗಿ. ಅಂತಹ ಅಸೂಯೆಯು ಕಳಂಕವಲ್ಲ. ಅದು ರಕ್ಷಣೆಗೆ ಅನುಕೂಲವಾದ ಮಮತೆಯ ಆಧಿಕ್ಯ. ಅಸಹನೀಯವಾದ ಪ್ರೀತಿಯ ಉತ್ಕಟೇಚ್ಛೆ. ಅಂತೆಯೇ ಆ ಸಂಸಾರದ ಯಾತ್ರೆಯು ಹದಗೆಡದೆ ಹೆಜ್ಜೆ ತಪ್ಪದೆ ಮುಂಬರಿದಿದೆ. ಆದುದರಿಂದಲೇ ಒಂದು ಕ್ಷಣವಾದರೂ ಶ್ರೀಧರಮೂರ್ತಿಯ ಮನಸ್ಸಿಗೆ ಹಿಂದಣ ನೆನಪಿನ ಮಬ್ಬು ಕೂಡಲಿಲ್ಲ. ಅಂದಿನ ಅತಿಚಾರಗಳ ನೆನಪು ಹಾಯಲಿಲ್ಲ. ತುಂಬಿದ ಇಂದಿನ ಬಾಳುವೆಗೆ ಹಿಂದಿನ ನೆನಪಿನ ನೋಟವು ಅನಗತ್ಯ. ಬೆಟ್ಟದಲ್ಲಿ ಚಿಮ್ಮಿ ಚಿಮ್ಮಿ ಹಾರಿದ ಸ್ರೋತವು ಬಯಲಕಡೆ ಗಂಭೀರವಾಗಿ ಹರಿದಾಗ ಅದರ ಪೂರ್ವದ ಇತಿವೃತ್ತಕ್ಕಾಗಿ ತಲೆಸುತ್ತಬೇಕಾಗಿಲ್ಲ. ಎಂದ ಮೇಲೆ ಈ ಊರಿಗೆ ಬಂದ ಮೇಲೆ ಅವನಿಗೆ ಅಂಬುಜಾಕ್ಷಿಯ ಕುರಿತು ಯೋಚಿಸಲು ಸಂದರ್ಭವೇಯಿದ್ದಿಲ್ಲ. ಅಥವಾ ತಿಳಿಯಬೇಕೆಂಬ ಕ್ಷೀಣಾಕಾಂಕ್ಷೆಯು ತಲೆದೋರಿದ್ದರೂ ಅದಕ್ಕೆ ಅನುಕೂಲತೆಯೂ ಇದ್ದಿಲ್ಲ. ಕಾರಣ—ಒಮ್ಮೆ ಆ ಮಾರ್ಗದಲ್ಲಿ ಹೋಗುತ್ತ ಅವನು ಅವಳ ಮನೆಯ ಮುಂದೆ ಬೇಪವೆಂದರೂ ಕಣ್ಣೆತ್ತಿನೋಡಿದಾಗ ಯಾವ ಆಕರ್ಷಣೆಯೂ ಅವನ ಕಣ್ಣುಗಳನ್ನು ಕಟ್ಟಿ ಸೆಳೆಯಲಿಲ್ಲ. ಅಲ್ಲಿ ಯಾರೋ ಅಪರಿಚಿತರು ವಾಸಿಸುತ್ತಿದ್ದಾರೆ ಎಂಬುದು ಆಗ ಸಿದ್ಧಾಂತವಾಯಿತು.

ಸಂದರ್ಭಗಳನ್ನು ಕಡೆಗಣಿಸುವುದು ಸುಲಭ. ಆದರೆ ಅವುಗಳನ್ನು ಇದಿರಿಸುವುದು ಸುತರಾಂ ಸುಲಭವಲ್ಲ. ಆ ಮನೆಯತ್ತ ಯಾರೂ ಕಂಡುಬಂದಿಲ್ಲವಾದರೆ ಅದು ಶ್ರೀಧರನ ಪುಣ್ಯ. ಕಂಡಿದ್ದರೆ?—ಎಂಬ ಪ್ರಶ್ನೆಯೊಡನೆ ಅವನು ತನ್ನ ಪರಿಸ್ಥಿತಿಯನ್ನು ತೂಗಿನೋಡಲು ಯತ್ನಿಸಿದನು. ಜೀವನವು ಪ್ರಶಾಂತವೆಂದರೆ ಅದಕ್ಕೆ ವಿರುದ್ಧವಾತಾವರಣದ ಆಘಾತದ ಅಭಾವವೇ ಮುಖ್ಯ ಕಾರಣ. ಆ ಹೊಸ್ತಿಲ ಬಳಿ ಅಂಬುಜಾಕ್ಷಿ ನಿಂತಿದ್ದರೆ—ತನ್ನ ಕಡೆ ಆಶ್ಚರ್ಯದ ನೋಟ ಬೀರಿ ಓ ಎಂದು ಉದ್ಗಾರವೆತ್ತಿದ್ದರೆ—! ಇದಕ್ಕೆ ಮೊದಲಿನ ಪರಿಸ್ಥಿತಿಯಲ್ಲೇ ಉತ್ತರ ಕೊಡುವುದೇನೂ ಕಷ್ಟವಿದ್ದಿಲ್ಲ. ಈಗ

ಒಬ್ಬ ಸ್ವಯಂ ವ್ಯಕ್ತಿಯಾಗಿ ಪ್ರತಿಷ್ಠಿತ ಅಧಿಕಾರಿಯಾಗಿ ಸುಖೀ ಸಂಸಾರಿಯಾಗಿ ಅದನ್ನು ಸಮ್ಮುಖೀಕರಿಸುವುದು ಕಷ್ಟತರವಿದ್ದಿತು.

ಈ ಯೋಚನೆಯಲ್ಲೇ ಅವ್ಯಕ್ತ ಯಾತನೆಯು ಹುದುಗಿದಂತಿದ್ದಿತು. ಅನಿರೀಕ್ಷಿತವಾದ ಅಮಂಗಳ ಪೀಡೆಯೊಂದು ಅವನ ಬೆನ್ನಹಿಂದೆ ಮೈಮರಸಿ ಸುಳಿಯುತಿದ್ದಂತೆ ಭಾಸವಾಯಿತು. ಅದೃಷ್ಟವಾದಿಯಲ್ಲದ ಶ್ರೀಧರನು ಆಗ ಲಾಗ ಅಂತಹ ಅಭದ್ರ ಕಲ್ಪನೆಯ ಕರಿನೆರಳು ತನ್ನಿಂದ ಎಂದಿಗೂ ದೂರ ವಿರಲಿ ಎಂದು ಕೈಮುಗಿದು ದೇವರನ್ನು ಬೇಡಿಕೊಂಡನು.

ಈ ಬೇಡಿಕೆಯು ಪೂರೈಕೆಯಾಯಿತೋ ಇಲ್ಲವೊ ಆದರೆ ಮೇಲಿನ ತಿಂಗಳಲ್ಲಿ ಬ್ರೊಥೆಲ್ ಆಕ್ಟಿಗನುಗುಣವಾಗಿ ಪೋಲಿಸ್ ಕೇಸೊಂದು ಕೋರ್ಟಿನ ಮುಂದೆ ಬಂದಿತು. ಅದರ ಟಿಪ್ಪಣಿಯಲ್ಲಿ Notorious ಎಂದು ಸೂಚಿತವಾಗಿದ್ದಿತು. ಅದಾವುದನ್ನೂ ಅವನು ವಿಶದವಾಗಿ ನೋಡಲಿಲ್ಲ. ಯಾರೆಂದು ತಿಳಿಯುವ ಗೋಜಿಗೂ ಹೋಗಲಿಲ್ಲ.

ಹಾಗೆ ಕೋರ್ಟಿಗೆ ಬಂದಾಗ ಪ್ರತಿವಾದಿಯ .ಸ್ಥಾನದಲ್ಲಿ ಅವನು ಕಂಡುದಾರನ್ನು? ಅವನ ಕಣ್ಣುಗಳನ್ನು ಅವನೇ ನಂಬಲಿಲ್ಲ. ಕುಳಿತಿದ್ದ ಸ್ಥಾನವು ಬಿಸಿಯೇರಿ ಕಾದಂತೆ ಅನುಭವವಾಯಿತು. ಅವಳು—ಅವಳು ಅಂಬುಜಾಕ್ಷಿ!

ಸರಕಾರೀ ವಕೀಲನು ವಾದಿಸುತ್ತಿದ್ದ. ಇವಳು ಅನೈತಿಕದ ಪ್ರತಿಬಿಂಬ ಸಮಾಜದ ಶತ್ರು! ಇವಳ ವಿಚಾರವು ಈ ಮೊದಲೇ ಘನಗೊಂಡ ಸರಕಾರದ ಗಮನಕ್ಕೆ ಬರಬೇಕಿದ್ದಿತು. ಆದರೆ ಇವಳು ಚತುರೆ—ರೂಪವತಿ—ಧನವತಿ! ಈ ತ್ರಿಶಕ್ತಿಗಳ ಅನುಸಂಧಾನದಿಂದ ಇವಳು ಎಲ್ಲಾ ಅಪಾದನೆ ಆರೋಪಣೆಗಳನ್ನು ತಲೆಮೆಟ್ಟಿ ಒದೆದಿದ್ದಳು. ಆದರೆ ನ್ಯಾಯವು ಯಾರನ್ನೂ ಬಿಡುವಂತಿಲ್ಲ. ಯಾರೂ ಸತ್ಯದ ತಲೆ ಮರಸುವಂತಿಲ್ಲ—! ಎಂದು ಈ ಮೊದಲೊಮ್ಮೆ ಅಂಬುಜಾಕ್ಷಿಯ ಪ್ರೇಮಯಾಚನೆಗಾಗಿ ಕಾದು ಕಾದು ನಿರಾಶನಾದ ಆ ಸರಕಾರೀ ವಕೀಲನು ಕಸುವಿನಿಂದ ಅಸುಹಿಂಡಿಕೊಳ್ಳುತಿದ್ದನು.

ಶ್ರೀಧರಮೂರ್ತಿಗೆ ಇದಾವುದೂ ಅರ್ಥವಾಗಲಿಲ್ಲ. ಅವನ ಹೃದಯದ ಪಕ್ಕದಲ್ಲಿ ಸಾವಿರ ಚೇಳುಗಳು ಕುಟುಕಿದಂತೆ ಭಾಸವಾಗುತ್ತಿದ್ದಿತು. ಈ ಪೀಡೆಯೇಕೆ ಕೋರ್ಟಿಗೆ ಬರಬೇಕಿದ್ದಿತೆಂದು ಅವನು ಶೂನ್ಯದೃಷ್ಟಿಯಿಂದ ನೋಡನೋಡುತ್ತಿದ್ದನು.

ಎಲ್ಲವೂ ಮುಗಿದ ವೇಳೆಗೆ ಅವನು ಆ ಕೇಸನ್ನು ಪುರಾವೆಸಾಲದೆಂದು ಡಿಸ್‌ಮಿಸ್ ಮಾಡಿಬಿಟ್ಟನು. ಎಲ್ಲರೂ ದೌಡು ಕಚ್ಚಿದರು. ಹಲವರು ನಮ್ಮ ಮ್ಯಾಜಿಸ್ಟ್ರೇಟರು ಹೆಂಗರುಳುಯಿರಬಹುದೆಂದು ಕಣ್ಣುಮಿಟುಕಿದರು. ಅಂಬುಜಾಕ್ಷಿ ಆಭಾರಿಯಾಗಿ ನಸುನಗುತ್ತ ಕೋರ್ಟು ಕೆಳಗಿಳಿದು ಹೊರಟು ಹೋದಳು.

ಅಂದಿಗೆ ಶ್ರೀಧರನ ತಲೆ ಸ್ವಸ್ಥವಿರಲಿಲ್ಲ. ಅವನು ಈ ಮೊದಲೇ ಊಹಿಸಿದ್ದ ಒಂದು ಆಶಂಕೆಯು ಬೃಹದಾಕಾರವಾಗಿ ಅವನ ಮುಂದೆ ಬಂದು ನಿಂತಂತಿದ್ದಿತು. ಮನಸ್ಸುಮಾಡಿದ್ದರೆ ಅಂಬುಜಾಕ್ಷಿಗೆ ಕೋರ್ಟಿನಮುಂದೆ ಬಾರದೇನೇ ಆ ಕೇಸಿನಿಂದ ನುಸುಳಿಹೋಗಬಹುದಿದ್ದಿತು. ಆದರೆ ಆಕೆ ಏನೋ ಉದ್ದೇಶಪೂರ್ವಕವಾಗಿಯೇ ಅದನ್ನು ಸಡಿಲು ಬಿಟ್ಟದ್ದಿರಬೇಕೆಂದು ತರ್ಕಿಸಿಕೊಂಡನು. ಆದರೂ ಅವಳು ಕೋರ್ಟಿನಲ್ಲಿ ಅವನ ಮುಂದೆ ಯಾವ ತರದ ಪರಿಚಯದ ಕುರುಹನ್ನೂ ತೋರಿಸಿದ್ದಿಲ್ಲ. ಅದಕ್ಕಾಗಿ ಅವನು ಅವಳಿಗೆ ಮನಸ್ಸಿನ ಧನ್ಯವಾದಗಳನ್ನು ಅರ್ಪಿಸಿದನು. ಆದರೆ ಆಶಂಕೆಯು ಬ್ರಹ್ಮರಾಕ್ಷಸನಂತೆ ಮಾಯಾವಿಯಾಗಿ ಬೆಳೆಯುತ್ತಲೇ ಹೋಗುವುದು. ಅದರ ಬೆಳವಣಿಗೆಯೇ ಅವನ ಪ್ರಾಣ ಹಿಂಡತೊಡಗಿತು. ಇದು ಒಂದು ಘಟನೆ ಮಾತ್ರ. ಇಂತಹ ಹತ್ತಾರು ಸಂದರ್ಭಗಳು ಕೂಡಿಬಂದರೆ ಅವುಗಳನ್ನೆಲ್ಲಾ ಕೆಲಸರಿಸಿ ಅವನು ತನ್ನ ಆತ್ಮಗೌರವವನ್ನು ಕಾಯ್ದುಕೊಳ್ಳಬಲ್ಲನೆ? ಅಥವಾ ಈ ಊರು ಅವನ ಪಾಲಿಗೆ ಮುಳ್ಳು ಹಾಸಿಗೆಯಾಗಲೂ ಬಹುದೆ?

ಆ ರಾತ್ರಿ ಅವನ ಹೆಂಡತಿಯು ಕೇಳಿದಳು—ಏನು ಈ ದಿನ ತುಂಬಾ ಯೋಚನೆ ಬಿದ್ದಂತಿದೆ?

ಏನಿಲ್ಲ ಒಬ್ಬಳು ಸೂಳೆಯ ಕೇಸು ಕೋರ್ಟಿಗೆ ಬಂದಿದ್ದಿತು. ಎಂದು ಉದಾಸವಾಗಿ ಹೇಳಿದನು.

ಅದೇನು ಕಾರಣ?

ಅವಳು ಸೂಳೆಯಾದುದರಿಂದ—

ಎಷ್ಟು ವರ್ಷ ಕಾಯಿಸಿ ಬಿಟ್ಟಿರಿ?

ಏಕೆ?

ಸೂಳೆಯಾದ್ದಕ್ಕೆ

ಸೂಳೆ ಅವಳಾದುದಲ್ಲ. ಜನರು ಮಾಡಿದ್ದು.

ಅವಳು ಆಗದೆ ಜನರು ಹೇಗೆ ಮಾಡುತ್ತಾರೆ?

ಜನರು ಮಾಡದೆ ಅವಳು ಹೇಗೆ ಆಗುತ್ತಾಳೆ?

ಇದೇ ನಿಮ್ಮ ಕುತರ್ಕ!

ಅದಕ್ಕಾಗಿ ಶಿಕ್ಷೆಯಿದ್ದರೆ ಅವಳಿಗೆ ಮಾತ್ರವಲ್ಲ ಜನರಿಗೂ ಬೇಕೇಬೇಕು. ಜನರಿಗೆ ಕಾಮ ಹೆಚ್ಚಿದೆ—ಹಣ ಹೆಚ್ಚಿದೆ. ಅದನ್ನು ಆ ಕಡೆ ಹೋಗಿ ಸುರಿದರೆ ಜನರನ್ನು ಮೊತ್ತಮೊದಲಿಗೆ ಗಲ್ಲಿಗೆ ಹಾಕಬೇಕು!

ಏನೋ! ಇದು ನನಗೆ ತಿಳಿಯುವುದಿಲ್ಲ. ನಿಮಗೆ ಸೂಳೆಯ ಮೇಲೆ ವಿಶ್ವಾಸವೋ ಏನೋ!—ಎಂದು ನಕ್ಕಳು.

ಶ್ರೀಧರಮೂರ್ತಿಯು ಕಾಲು ಜಾರಿದವನಂತೆ ತಡವರಿಸುತ್ತ—ಹಾಗಲ್ಲ ನೀನೇ ಹೇಳು. ಅವಳು ಸೂಳೆಯಲ್ಲದೆ ಮತ್ತೇನಾಗಬೇಕು? ಗರತಿಯಾಗಬೇಕಿತ್ತೆ?

ಅದು ಹೇಗೆ ಸಾಧ್ಯ?

ಅದೇನು?

ಅವಳು ಸೂಳೆಯ ಮಗಳು. ಸೂಳೆಯೆ!

ಅವಳು ಒಮ್ಮಿಂದೊಮ್ಮೆ ಮಹಾಪತಿವ್ರತೆಯಾದರೂ ಯಾರಾದರೂ ಅವಳು ಸೂಳೆಯಲ್ಲ ಎನ್ನುವರಿದ್ದಾರೆಯೆ?

ಇಲ್ಲ.

ಒಮ್ಮೊಂದೊಮ್ಮೆ ಮಹಾಪತಿವ್ರತೆ ಸೂಳೆಯಾದರೂ ಅವಳನ್ನು ಸೂಳೆ ಎನ್ನುವವರಿದ್ದಾರೆಯೆ?

ಅದೂ ಇಲ್ಲ.

ಹಾಗಾದರೆ ಬಿಡು. ಶಿಕ್ಷೆಬೇಕಾದುದು ಸೂಳೆಗಲ್ಲ—ಜನರಿಗೆ!

ಸಾಯಲಿ, ಹೋಗಲಿಯಪ್ಪ! ನೀವಂತೂ ಮೆಜಿಸ್ಟ್ರೇಟರು. ನಿಮ್ಮ ಕಾನೂನು ನಿಮಗೆ! ಎಂದು ವಸುಮತಿಯು ಮಾತುಹಾರಿಸಿ ಗಂಡನಿಗೆ ತಾಂಬೂಲ ಕೊಟ್ಟಳು.

ಈ ಸಂದರ್ಭವು ನಡೆದಮೇಲೆ ಅದು ಅಷ್ಟಕ್ಕೇ ನಿಂತಿದ್ದಿತು. ಅಂತೆಯೇ ಅದು ಅವನ ಮನಸ್ಸಿನಿಂದ ಮಾಸತೊಡಗಿತು. ಮತ್ತೆ ಒಂದು ತಿಂಗಳಲ್ಲಿ ಅವನು ವಿರಾಮವಾಗಿ ಪೇಟೆ ಸುತ್ತುತಿದ್ದ. ಅವನ ಹಿಂಗಡೆಯಿಂದ ದಫೇದಾರನೂ ಇದ್ದನು. ಅವನು ತೆಂಕು ಬೀದಿಯಲ್ಲಿ ಹೋಗುವ ವೇಳೆ ಎಂಟು ವರ್ಷದ ಬಾಲಕನೊಬ್ಬ ಇವನಿಗೆ ಅಡ್ಡಹಾಯ್ದು ಓಡತೊಡಗಿದ್ದನು. ಶ್ರೀಧರನು ಅಲ್ಲೇ ನಿಂತು ನೋಡಿದನು. ಹಿಂಗಡೆಯಿಂದ ದಫೇದಾರನೂ ಕಣ್ಣುಬಿಟ್ಟು ನೋಡುತಿದ್ದನು. ನೋಡುತಿದ್ದಂತೆ ಆ ಹುಡುಗ ಮುಂದಿನ ಒಂದು ವಿಶಾಲವಾದ ಹೊಸ ಮನೆಯ ಗೇಟು ದಾಟಿ ಒಳ ಹೊಕ್ಕನು. ಮತ್ತೆ ಹುಡುಗನು ಕಂಡುಬರಲಿಲ್ಲ. ಆದರೆ ಅಷ್ಟು ಕಂಡುದರಲ್ಲೇ ಶ್ರೀಧರ ಮೂರ್ತಿಯು ಅವಾಕ್ಕಾಗಿ ನಿಂತಿದ್ದನು. ದಫೇದಾರ ಮೆಲ್ಲನೆ ರಾಗವೆಳೆದನು—ಹುಡುಗ ಸ್ವಲ್ಪ ಚಿಕ್ಕವನಾಗಿದ್ದರೆ ನಾನು ನಮ್ಮ ಮರಿ ರಾಯರೆಂದೇ ಹಿಡಿದುಬಿಡುತಿದ್ದೆ! ಸಾಕ್ಷಾತ್ ನಮ್ಮ ಮರಿರಾಯರ ಹಾಗೇನೇ!

ಶ್ರೀಧರಮೂರ್ತಿ ತೀವ್ರವಾಗಿ ಅವನನ್ನು ದಿಟ್ಟಿಸಿ ಬೇಗ ಬೇಗ ಮುನ್ನಡೆದನು. ಅದು ಯಾರ ಮನೆ ಎಂದು ಕೇಳಲೂ ಧೈರ್ಯಗೊಳ್ಳಲಿಲ್ಲ.

ಬಹುದಿನಗಳ ತನಕ ಅವನು ಆ ಮಾರ್ಗದಲ್ಲಿ ಕಾಲಿಡಲು ಅಂಜಿದನು. ಅಲ್ಲೇನೋ ಒಂದು ಪ್ರೇತಬಾಧೆಯಿದೆ ಎಂಬುದಂತೂ ಖಂಡಿತವಾಗಿದ್ದಿತು. ಆದರೆ ಅದನ್ನು ಕೂಲಂಕುಷ ವಿಮರ್ಶಿಸಬೇಕೆಂಬ ಕುತೂಹಲವೂ ಅಂತೆಯೇ

ನಿರ್ಭರವಾಗಿದ್ದಿತು. ಪೀಡೆಯಿದೆ ಎಂಬುದನ್ನು ತಿಳಿದಷ್ಟೂ ಅದರ ಪರಿಹಾರಕ್ಕಾಗಿ ಜೀವವು ಯತ್ನಿಸುವುದು ಸ್ವಾಭಾವಿಕವಾಗಿದೆ. ಪೀಡೆಯನ್ನು ಬರಲೀಸದಿರುವುದು ಎಂತು ಮುಖ್ಯವೋ ಅಂತೆಯೇ ಬಂದ ಪೀಡೆಯನ್ನು ನಿವಾರಿಸಲೆಳಸುವುದೂ ಜೀವನ ಧರ್ಮದ ಸಂಕ್ಷರಣೆಯ ಪ್ರಾಕೃತಿಕ ಪಾಠ. ಅದರ ಅನುಸಂಧಾನಕ್ಕಾಗಿ ಅವನ ಹೃದಯವು ಹಾತೊರೆಯಿತು. ಆದರೆ ಈಬಾರಿ ಒಬ್ಬಂಟಿಗನಾಗಿಯೇ ಹೋಗಲು ಮನಸ್ಸುಮಾಡಿದನು. ಏಕೆಂದರೆ ದಫೇದಾರನ ಹಿಂದಿನ ಮಾತು–ಸಾಕ್ಷಾತ್ ನಮ್ಮ ಮರಿ ರಾಯರ ಹಾಗೆಸೇ–ಎಂದ ಆ ಭ್ರಮೆ ಅವನಿಗೆ ಬಹಳ ಹೆಚ್ಚಾಗಿದ್ದಿತು.

ನಾಲ್ಕು ದಿನಗಳ ನಂತರ ಗುರುತಿಟ್ಟುಕೊಂಡು ಮನೆಯ ಮುಂದೆ ಸಂಜೆ ಹೊತ್ತು ಅವನು ಉದ್ದೇಶ ಪೂರ್ವಕವಾಗಿಯೆ ಹೋಗುತಿದ್ದನು. ಆದರೆ ಅಲ್ಲಿ ಯಾರೂ ಕಂಡುಬರಲಿಲ್ಲ. ಮತ್ತೆ ಅದೇ ಮಾರ್ಗವಾಗಿ ಹಿಂದೆ ಬರುತಿದ್ದಾಗ ಆ ಹುಡುಗ ಮನೆಯಿದಿರಿನ ತೋಟದಲ್ಲಿ ಗಿಡಗಳೆಡೆಯಲ್ಲಿ ತೂರಿ ತೂರಿ ಚಿಟ್ಟೆ ಹಿಡಿಯುತಿದ್ದನು. ಮೊನ್ನೆ ಮೊನ್ನೆ ಆ ಪೇದೆ—ಮರಿ ರಾಯರ ಹಾಗೆ—ಎಂದ ಮಾತು ತೀರಾ ಸತ್ಯ. ನೋಡುತಿದ್ದಂತೆ ಅವನ ದೃಷ್ಟಿ ಎಂಟು ವರ್ಷಗಳ ಹಿಂದೆಸರಿಯಿತು. ಅಷ್ಟರಲ್ಲಿ ಇದಿರು ಬಾಗಿಲಿನಿಂದ ಹೆಣ್ಣು ಮಗಳೊಬ್ಬಳು ಮೂರ್ತೀ ಮೂರ್ತೀ ಎಂದು ಕರೆಯುತ್ತ ಅಂಗಳಕ್ಕಿಳಿದಳು.

ಅವಳೇ ಅಂಬುಜಾಕ್ಷಿ! ಆದಿನ ಮಳೆಸುರಿಯುತಿದ್ದ ವೇಳೆ ಬಾಗಿಲು ತೆರೆದು ಒಳಕರೆದೊಯ್ದ ಅಂಬುಜಾಕ್ಷಿ! ಅವನ ಹೃದಯದೊಡನೆ ಪ್ರಥಮ ಪ್ರಣಯವನ್ನು ಕೂಡಿಸಿ ತಣಿಸಿದ ಅಂಬುಜಾಕ್ಷಿ! ಮತ್ತೆ ಅವನ ಎರಡು ದಿನಗಳ ಅಪರಾಧದ ಹೊರೆಯನ್ನು ಹೊತ್ತು ಹೆತ್ತು ಸಲಹಿದ ಅಂಬುಜಾಕ್ಷಿ! ಆ ಹೊರೆಯೇ ಮುಂದೆ ನಿಂತಿರುವ ಆ ಹುಡುಗ.

ಅಂಬುಜಾಕ್ಷಿ ಮುಖವೆತ್ತಿ ಬೀದಿಯ ಕಡೆ ನೋಡಿದಳು. ಆಗ ಇಬ್ಬರ ಕಣ್ಣುಗಳೂ ಕೂಡಿದುವು. ಇಬ್ಬರ ತುಟಿಗಳೂ ಅದುರಿದುವು. ಇಬ್ಬರ ಎದೆಯೂ ಡಬಡಬ ಬಡಿದುಕೊಂಡಿತು. ಹಣೆ ಬೆವರಿತು. ಆದರೆ ಇಬ್ಬರೂ

ತುಟಿ ತೆರೆಯಲಿಲ್ಲ. ಕ್ಷಣಕಾಲ ಸುಮ್ಮನೆ ನೋಡುತ್ತ ನಿಂತರು. ಸ್ವಲ್ಪ ಹೊತ್ತಿನ ಮೇಲೆ ಅವಳು ಆದರದಿಂದ ನಸುನಕ್ಕಳು.

ಆಗ ಶ್ರೀಧರಮೂರ್ತಿಯು ಅದಕ್ಕೆ ಪ್ರತಿಯಾಗಿ ನಗುವ ನಿರ್ಧಾರಕ್ಕೆ ಬಂದಿದ್ದಿಲ್ಲ. ಈ ನಗೆಯ ಪರಿಣಾಮವು ಹಿತವಲ್ಲವೆಂದು ಅವನ ಆತ್ಮವು ಸಾರುತಿದ್ದಿತು. ಏನೋ ನಿಮಗೆ ಸೂಳೆಯ ಮೇಲೆ ವಿಶ್ವಾಸವೆಂದ ಅವನ ಹೆಂಡತಿಯ ಮಾತು ಒಮ್ಮೆಗೇ ನೆನಪಿಗೆ ಬಂದಿತು. ಆದುದರಿಂದಲೇ ಬಿಗು ಮನಸ್ಸಿನಿಂದ ತುಟಿಕಚ್ಚಿಕೊಂಡು ಸುಮ್ಮನೆ ನಿಂತಿದ್ದನು.

ತನ್ನ ನಗೆಗೆ ಅಲ್ಲಿ ಸುಸ್ವಾಗತವಿಲ್ಲವೆಂದು ತಿಳಿದಮೇಲೆ ಅಂಬುಜಾಕ್ಷಿಯು ಮುಖತಿರುಗಿಸಿ—ಬಾರೊ! ಒಳಗೆ ಹೋಗೋಣ—ಎಂದು ಹುಡುಗನ ಕೈಹಿಡಿದು ಸೆಳೆದು ಮನೆಸೇರಿದಳು. ಮತ್ತೆ ಹಿಂತಿರುಗಿ ನೋಡಲಿಲ್ಲ. ಶ್ರೀಧರನೂ ಎಚ್ಚರಗೊಂಡವನಂತೆ ಲಗುಬಗೆಯಿಂದ ಹೆಜ್ಜೆಯಿಡುತ್ತ ಮನೆ ಸೇರಿ ಆರಾಮ ಕುರ್ಚಿಯ ಮೇಲೆ ಭಾರವಾಗಿ ಬಿದ್ದುಬಿಟ್ಟನು.

ಅವನಿಗೆ ಅಲ್ಲೇ ಅಯಾಚಿತವಾಗಿ ಜೋಂಪಹರಿತು. ಅಂತಹ ಅರೆನಿದ್ದೆಯಲ್ಲಿ ಅವನು—ಅಂಬುಜಾಕ್ಷಿಯು ನಸುನಕ್ಕಾಗ ತಾನೂ ನಗುತ್ತಾ ಅವಳ ಬಳಿಸಾರಿ ಕೈಹಿಡಿದು ಮನೆಸೇರಿದಂತೆಯೂ, ಆಕೆ ಅವನನ್ನು ಬಿಗಿದಪ್ಪಿ ಅಯ್ಯೋ! ಈತನಕವೂ ನನ್ನನ್ನು ಮರೆತುಬಿಟ್ಟಿರಲ್ಲಾ—ಎಂದು ಗೋಳಾಡಿದಂತೆಯೂ, ಆಗ ಅವಳನ್ನು ಬಿಗಿದಪ್ಪಲು ಕೈನೀಡಿದಾಗ ಅವನ ಕೈ ಮೇಲ್ಗಡೆ ತೂಗ ಹಾಕಿದ ಪಟಕ್ಕೆ ತಗಲಿ ಅದು ಕೆಳಬಿದ್ದು ಕನ್ನಡಿ ಪುಡಿಪುಡಿಯಾದಂತೆಯೂ ಕಂಡನು. ಕೆಳಬಿದ್ದ ಪಟವೇನೆಂದು ನೋಡಿದಾಗ ಅದು ತಾಯಕೂಡೆ ನಿಂತಿದ್ದ ಒಂದು ಜಿಂಕೆಯ ಮರಿಯ ಮೇಲೆ ಹಾರಲು ಹೊಂಚುತಿದ್ದ ಹುಲಿ!

ಶ್ರೀಧರಮೂರ್ತಿಯು ನಿದ್ದೆಯಲ್ಲೇ ಹೋ!—ಎಂದು ಕೂಗಿ ಅದನ್ನು ತಡೆಯಲು ಪ್ರಯತ್ನಿಸಿದನು.

ಇದೇನಪ್ಪ ಹೊಸತು? ಊಟಕ್ಕೆ ಮುಂಚೆಯೇ ನಿದ್ರೆಯೆಂದರೆ ಏನೋ ಕುಂಭಕರ್ಣನ ಪಟ್ಟ!—ಎಂದು ಊಟಕ್ಕೆ ಕರೆಯಲು ಬಂದ ವಸುಮತಿ ಮೈಮುಟ್ಟಿದಾಗ ಅವನು ಸಂಪೂರ್ಣವಾಗಿ ಎಚ್ಚತ್ತನು.

## ಎಸಳು ೭ ಮೂರ್ತಿಭಂಗ

ಮೂರು ದಿನಗಳ ತನಕವೂ ಇದೇ ವಿಚಾರವು ಶ್ರೀಧರಮೂರ್ತಿಯ ತಲೆ ಸುತ್ತುತಿದ್ದಿತು. ಆ ಹುಡುಗನ ವಿಚಾರ ತನ್ನ ಸ್ಥಾನಮಾನಗಳ ವಿಚಾರ ತನ್ನ ಸಂಸಾರದ ಸುಖದ ವಿಚಾರ ಈ ಪರಿಣಾಮ ಕಲ್ಪನೆಯಲ್ಲಿ ಅವನ ತಲೆ ತಿರುಗುತಿದ್ದಿತು. ಅವನ ಪೇದೆ ಆ ವಿಚಾರ ಈ ವಿಚಾರಕ್ಕಾಗಿ ವಸುಮತಿಯ ಹಿಂದೆ ಹಿಂದೆ ಸುಳಿದಾಗಲೆಲ್ಲ ಇನ್ನೆಲ್ಲಿ—ಸಾಕ್ಷಾತ್ ನಮ್ಮ ಮರಿರಾಯರ ಹಾಗೆ—ಎಂದು ಅವಳ ಮುಂದೆ ಊದಿಬಿಡುತ್ತಾನೋ ಎಂದು ಎದೆ ಪಡಪಡಿಸುತಿದ್ದಿತು. ಅಂಜಿಕೆಯು ಯಾವತ್ತಿಗೂ ಬ್ರಹ್ಮ ರಾಕ್ಷಸನಂತೆ ಬೆಳೆಯುತಿರುವುದು. ಕಲ್ಪನೆಯ ಕವಲು ಕವಲುಗಳ ಮೇಲೆ ಕುಣಿದಾಡಿ ಬದುಕಿನ ಮೂಲೆಮೂಲೆಯ ಕತ್ತಲಭಾಗಗಳಲ್ಲಿ ಹೊಂಚಿ ಹೆದರಿಸುತಿರುವುದು. ಪ್ರತಿಜೀವನದಲ್ಲೂ ಅಂತಹ ಕತ್ತಲ ಭಾಗವು ಇದ್ದೇ ಇದೆಯಲ್ಲ! ಯಾರ ಜೀವನವೂ ಸಂಪೂರ್ಣವಾಗಿ ಉಜ್ವಲವಾಗಿಲ್ಲ—ನಿರ್ಮಲವಾಗಿಲ್ಲ. ಆದರೆ ಆ ಕುರಿತು ಪ್ರಶ್ನೆ ಕೇಳುವ ದಿನವೊಂದು ಬರುವತನಕ ಎಲ್ಲವೂ ಸುಖಮಯವಾಗಿಯೇ ಸಾಗುವುದು. ಕೊನೆಗೆ ಸಂಶಯದ ಕೈ ನೀಡಿಕೆಯೊಂದು ಮನಸ್ಸಿನ ಮೇಲೆ ನೆರಳು ಹಾಯಿಸುವಾಗ ಮನುಷ್ಯನು ತನ್ನ ಕರ್ಮದಶೋಧನೆಯಲ್ಲಿ ತಾನೇ ತೊಡಗುವನು. ಸಂವಿದ್ಧ—ಅಸಂವಿದ್ಧಗಳ ನಡುವೆ ಹೃದಯವು ಹೊಯ್ದಾಡಿ ಹುಚ್ಚುಹುಚ್ಚಾಗುವುದು. ಇಂತಹ ಹೆಚ್ಚಳವೇ ಆತ್ಮದ ಪೀಡೆ—ಸಂಸ್ಕೃತಿಯ ನಾಶ—ಆದರ್ಶದ ಅಧಃಪತನ!

ಸಂಶಯವು ಪ್ರಾಣಿಗಳ ಸಹಜವಾದ ಧರ್ಮ, ಸಂಶಯದ ಮೇಲೇನೇ ಅವುಗಳ ಆತ್ಮರಕ್ಷಣೆಯು ನಿಂತಿದೆ. ಕಿವಿ ನಿಮಿರಿಸಿ ಕಾಲ್ಗೆದರಿ ನೆಲಮೂಸಿ ದೌಡೋಡುವ ಸಂದೇಹ ಪ್ರವೃತ್ತಿಯೇ ಪ್ರಾಣಿಗಳ ಕುಲವನ್ನು ಘಾತಕ ದಿಂದ ಕಾಯ್ದಿದೆ. ಮನುಷ್ಯನಲ್ಲೂ ಇಂತಹ ಪ್ರವೃತ್ತಿಯು ಉದ್ಗವು ವಾದರೆ ಅದು ಸಂರಕ್ಷಣೆಯ ಒಂದು ಅಂಗ. ಯಾವ ಕುರಿತು ಅವನಿಗೆ ಸಂಶಯವು ಮೂಡುವುದೋ ಆ ವಿಷಯದಲ್ಲಿ ಅವನಿಗೆ ಅನನ್ಯಸಾಧಾರಣ ವಾದ ಪ್ರೀತಿಯು ನಿಚ್ಚಳವಾಗಿದೆ ಎಂಬುದೇ ಅದರ ಅರ್ಥ. ಶ್ರೀಧರ ಮೂರ್ತಿಯು ಸಂಸಾರಿಗನು. ಗೂಡಿನ ಮರಿಮೊಟ್ಟೆಗಳನ್ನು ಅತಂದ್ರತೆ ಯಿಂದ ಸಾಕುವ ಹಕ್ಕಿಯಂತೆ ತನ್ನ ಹೆಂಡತಿ ತನ್ನ ಮಗ ಎಂಬ ತನ್ನ ತನಗಳ ಮೇಲೆ ಅಪಾರಪ್ರೀತಿಯ ಪಕ್ಕದ ಹೊದಿಕೆ ಹೊದ್ದಿಸಿ ಕಾಯುವ ಕಾವಲುಗಾರ. ಅಂತಹ ಸುಸ್ಥಿತಿಯ ಕಾವಲುಗಾರನಿಗೆ ತನ್ನ ಜೋಪಾನದ ಬೆಲೆ ತಿಳಿದೇಯಿದೆ. ತನ್ನ ಕರ್ತವ್ಯದ ಹೊಣೆಯರಿತೇಯಿದೆ. ಆದುದ ರಿಂದಲೇ ಅವನು ತನ್ನ ಪುಟ್ಟ ಸಂಸಾರದ ಸುಭದ್ರತೆಗಾಗಿ ಆ ಮೂರು ದಿನ ಗಳಲ್ಲೂ ತಲೆ ಸುತ್ತುತಿದ್ದನು.

ಇಂತಹ ಸಂದರ್ಭವೂ ಒಂದಲ್ಲ ಒಂದು ದಿನ ಬಂದೊದಗಲೇ ಬಹುದು. ವಸುಮತಿಯು ಒಂದು ದಿನ ಬೀದಿಹಿಡಿದಿರುವಾಗ ಆ ಹುಡುಗನನ್ನು ಇದಿರು ಗೊಳ್ಳಬಹುದು. ಅಥವಾ ತನ್ನ ಹುಡುಗ ಹೋಗುವ ಶಾಲೆಗೆ ಆ ಹುಡು ಗನೂ ದಾಖಲಾಗಿ ಶಾಲೆಯವರು ಒಬ್ಬರೊಬ್ಬರ ಮುಖ ನೋಡಿಕೊಳ್ಳು ವಂತಾಗಬಹುದು. ಅದೂ ಅಲ್ಲವಾದರೆ ಬಾಯಿಬಡಕ ಜನರು ಹೀಗೂ ಸಾದೃಶ್ಯವೆ--ಎಂದುಕೊಳ್ಳುವ ಮಾತು ಮನೆಯ ಹೊಸ್ತಿಲು ದಾಟಿ ಒಳಗೂ ಪ್ರವೇಶಿಸಿ ಹಲ್ಲೆಮಾಡಬಹುದು. ಹೇಗೇಯಿರಲಿ. ಪರಿಣಾಮವಂತೂ ಒಂದೇ. ಸಮುದ್ರಮಥನಲ್ಲಿ ವಿಷವು ಕಂಡುಬಂದಂತೆ! ಅಂತಹ ವಿಷವನ್ನು ಯಾರಾದರೂ ಒಬ್ಬರು ಕುಡಿದು ತೀರಿಸಲೇ ಬೇಕಲ್ಲ! ಆದರೆ ಹೇಗೆ?

ಯೋಚಿಸಿದಷ್ಟು ಶ್ರೀಧರಮೂರ್ತಿಯ ತಲೆ ಚಿಟ್ಟೆಹಿಡಿಯತೊಡಗಿತು. ಕಟ್ಟಕಡೆಗೆ—ಆಗಲಿರುವುದು ಆಗಿಯೇತೀರಲಿದೆ. ನಮ್ಮದು ಏನುಯತ್ನ?- ಎಂಬ ಅದೃಷ್ಟ ಪ್ರತಿಪಾದನೆಗೆ ಶರಣುಹೊಡೆದು ಸುಮ್ಮನಾದನು.

ಈ ರೀತಿಯ ಆತ್ಮ ಸಮಾಧಾನದಿಂದ ಒಂದು ತಿಂಗಳು ಕಳೆದುಹೋಯಿತು. ಮತ್ತೊಂದುದಿನ ರಾತ್ರಿ ವಸುಮತಿ ನಗುತ್ತಾ ಕೇಳಿದಳು—

ಅಲ್ಲಾಂದ್ರೆ! ನಮ್ಮ ನಿಂಗಪ್ಪಹೇಳ್ತಾನೆ, ನಮ್ಮ ದೇವನಹಾಗಿರೋ ದೊಡ್ಡ ಹುಡುಗನೊಬ್ಬ ಈ ಊರಲ್ಲಿ ಇದ್ದಾನಂತೆ. ಆಶ್ಚರ್ಯ! ನಿಮಗೆ ಗೊತ್ತಿದೆಯೆ?

ಶ್ರೀಧರಮೂರ್ತಿ ನಾಲಿಗೆ ಕಚ್ಚಿಕೊಂಡು ಹೇಳಿದ ಆಶ್ಚರ್ಯವೇನು? ಒಂದು ನಾಯಿಯ ಹಾಗೇನೇ ಮತ್ತೊಂದು ನಾಯಿ ಇರೋದಿಲ್ಲವೇ?

ಹಾಗಂದ್ರೆ! ನಾಯಿಯೂ ಮನುಷ್ಯನೂ ಒಂದೆನೆಯೆ? ಹಾಗಾದರೆ ನಿಮ್ಮ ಹಾಗೆ ಇರೋರು ಎಷ್ಟುಮಂದಿ ಇದ್ದಾರೆ ಈ ಊರಲ್ಲಿ?

ಇರಲೂಬಹುದು. ನನಗೇನು ಗೊತ್ತು? ನಿನ್ನ ನಿಂಗಪ್ಪನಕೂಡೆ ಹೇಳಿದರೆ ತಲಾಸಿ ಮಾಡಿಕೊಟ್ಟಾನು!

ಆ ಮಾತು ಅಲ್ಲಿಗೇ ವಿರಸವಾಗಿ ನಿಂತುಹೋಯಿತು. ಆದರೆ ಅದರಿಂದಾಗಿ ಅವನ ಮನಸ್ಸಿನ ಮೇಲೆ ನಡೆದ ಪ್ರತಿಕ್ರಿಯೆಯ ದಾಳಿಯು ನಿಲ್ಲಲಿಲ್ಲ. ಇಷ್ಟು ದಿನಗಳಮೇಲೆ ಇದೊಂದು ಸಂಗತಿಯು ತನ್ನ ಮನೆಯೊಳ ಸೇರಿದೆ ಎಂಬುದು ಅವನಿಗೆ ಖಚಿತವಾಯಿತು.

ಬದುಕುಬಂಡಾಯ ಹೂಡುವುದಿದೆ. ಸ್ವಾರ್ಥವು ತೆರೆತೆರೆಗಳ ತುಮುಲಿನೊಡನೆ ಮೇಲೆದ್ದು ಬದುಕಿನ ಬಂಡಾಯ ಹೂಡುವುದಿದೆ! ಅಂತಹ ಸ್ವಾರ್ಥದಿಂದಾಗಿ ಹೃದಯದ ಸೌಮ್ಯತೆಯ ಮುಖಮುದ್ರೆಯು ಕಳಚಿಬಿದ್ದು ಅಶಾಂತಿಯ ಕೋಲಾಹಲದೊಂದಿಗೆ ಜೀವದ ಅಸತ್‌ಸ್ವರೂಪವು ಪ್ರಕಟವಾಗುವುದು. ಆದರೆ ಶ್ರೀಧರಮೂರ್ತಿಯ ಅಸತ್‌ಸ್ವರೂಪವು ನಿತ್ಯ ವ್ಯಕ್ತಿಗತವಾದುದಲ್ಲ. ವಾತಾವರಣವನ್ನು ಹೊಂದಿ ನೈಮಿತ್ತಿಕವಾದುದು. ಅಸತ್ ಸ್ವರೂಪದ ಪ್ರಚೋದನೆಯಿಂದಾಗಿ ವಿವೇಕವು ಕುಂಠಿತವಾಗಿ ಆತ್ಮನು ದುರಾತ್ಮನಾದಾಗ ಶ್ರೀಧರನಿಗೆ ಮುಂದೆ ಕಾಣುತಿದ್ದುದು ಎರಡೇ ವಿಷಯ. ತನ್ನ ಮಗ—ತನ್ನದಲ್ಲದ ಮಗ! ಇವೆರಡೂ ಒಂದಾಗಿ ನಿಲ್ಲಲು ಸಾಧ್ಯವಿಲ್ಲ. ಅಥವಾ ಸಾಧ್ಯವಿದ್ದರೂ ಸಮಾಜದ ಸಹನೆಯಿಲ್ಲ. ಹೀಗೆ ಸಹನೆಗೆಟ್ಟ ಶೂನ್ಯತೆಯಿಂದ ಅವನು ಆ ಸಂಜೆ ಸೈಕಲು ಹತ್ತಿ ಪೇಟೆಗೆ ಹೊರಟನು.

ಅದು ಶಾಲೆಬಿಟ್ಟಹೊತ್ತು. ಇದಿರಿನಿಂದ ಹುಡುಗರ ಗುಂಪು ಬರುತಿದ್ದಿತು. ಅಡ್ಡಾದಿಡ್ಡ ಓಡುತೋಡುತ್ತ ಜಗಳಾಡುತ್ತ ಬರುತಿದ್ದಿತು. ಆಗ ಹಿಂದಿನಿಂದ ಯಾರೋ ಹೇಳಿದ ಭಾವನೆಯಾಯಿತು—ಅಲ್ಲಾಂದ್ರೆ—ಈ ಊರಲ್ಲಿ ನಮ್ಮ ದೇವನಹಾಗಿರೋ ಹುಡುಗನಿದ್ದಾನಂತಲ್ಲ!—ಹೌದು ಅದೇ ಹುಡುಗನು ಇದಿರು ಬರುತಿದ್ದನು.

ಓಡುತ್ತ ಬರುತಿದ್ದ ಆ ಹುಡುಗನು ಸೈಕಲನ್ನು ಕಂಡು ಬಲಪಕ್ಕಕ್ಕೆ ಸರಿದನೆನ್ನುವಾಗ ಹಿಂಗಡೆಯಿಂದ ವೇಗವಾಗಿ ಮೋಟರೊಂದು ತೂರಿ ಬಂದಿತು. ಬಲಕ್ಕೆ ತುಸು ಸರಿದಿದ್ದ ಹುಡುಗನು ಪುನಃ ಎಡಕ್ಕೇ ತಿರುಗಿದನು. ಆಗ ಶ್ರೀಧರಮೂರ್ತಿ ಹುಡುಗ ಸೈಕಲಕಡೆಬಂದಾಗ ಜೋರಾಗಿ ಬೆಲ್ ಬಾರಿಸಿದನು. ಹುಡುಗ ಕಕ್ಕಾಬಿಕ್ಕಿಯಾದ ಪಾಪ! ಮತ್ತೊಂದು ಕ್ಷಣದಲ್ಲಿ ಏನೂ ಅರಿಯದೆ ಬಲಪಕ್ಕಕ್ಕೆ ಹೊರಳಿ ಮೋಟರಿನ ಮುಂದೆ ಧಾವಿಸಿದನು. ಹುಡುಗ ಎಡಗಡೆಗೆ!ತಿರುಗಿದನೆಂದು ಭಾವಿಸಿದ್ದ ಡ್ರ್ಯೈವರನು ಬಲವಾಗಿ ಬ್ರೇಕ್‌ಹಾಕುವ ವೇಳೆಗೆ ಮಡ್‌ಗಾರ್ಡಿಗೆ ಡಿಕ್ಕಿಹೊಡೆದೂ ಆಯಿತು. ಆ ವೇಗವು ಹುಡುಗನನ್ನು ನಾಲ್ಕುಮಾರುಗಳ ದೂರಕ್ಕೆ ಹಾರಿಸಿ ಬಿಟ್ಟಿತು.

ಮೋಟರು ನಿಂತಿತು. ಆದರೆ ಜಿಗಿದುಬಿದ್ದ ಹೊಡೆತಕ್ಕೆ ಹುಡುಗನ ತಲೆಗೆ ಪೆಟ್ಟಾಗಿ ರಕ್ತಸುರಿಯತೊಡಗಿತು. ಹಾ ಹಾ ಎನ್ನುವುದರೊಳಗಾಗಿ ಜನರ ಗುಂಪೇ ಕೂಡಿಹೋಯಿತು. ಆದರೆ ಅದನ್ನೆಲ್ಲ ನೋಡಲು ಶ್ರೀಧರ ಮೂರ್ತಿಯು ನಿಲ್ಲಲಿಲ್ಲ. ಭೂತ ಹಿಡಿದವನಂತೆ ಸೇದುತ್ತ ಒಂದೇ ಸವನೆ ಸೈಕಲು ಬಿಟ್ಟನು. ಮತ್ತೆ ಆ ಕಡೆಯಿಂದ ತಿರುಗಿ ಮನೆ ಸೇರಿ ಸೈಕಲನ್ನು ಬದಿಗೆ ಬಿಸುಟು ಉಸ್ಸೆಂದು ಹಣೆಗೆ ಕೈಹಿಡಿದು ಆರಾಮಕುರ್ಚಿಯ ಮೇಲೆ ಬಿದ್ದುಬಿಟ್ಟನು!

ಇದೇನು ಆತ್ಮದ ವಿಜಯವೆ? ಶ್ರೀಧರಮೂರ್ತಿ ತನ್ನೊಡನೆಯೇ ಕೇಳಿಕೊಂಡನು. ಎದೆಯ ಮೇಲೆ ಕೈಯಿಟ್ಟಾಗ ಅದು ಎಂದಿಗಿಂತ ಇಮ್ಮಡಿಯಾಗಿ ಬಡಿದಾಡುತಿದ್ದಿತು. ಮೂಗಿನ ಬಳಿ ಬೆರಳಿಟ್ಟಾಗ ಅದೂ ಹೆಚ್ಚು ಒತ್ತಡದಿಂದ ಸೆಳೆದಾಡುತಿದ್ದಿತು. ಮೈಯೆಲ್ಲಾ ಬೆವರಿ ತಲೆ

ತಿರುಗುತಿದ್ದಂತೆ ಭಾಸವಾಯಿತು. ಕಣ್ಣಮುಂದೆ ರಕ್ತ—ರಕ್ತದ ಹೊಳೆ! ಆ ಹೊಳೆಯಲ್ಲಿ ಮೈಮುದುರಿ ತೇಲುತಿದ್ದುದು ಅದೇ ಹುಡುಗನ ದೇಹ! ಅಲ್ಲ—ಅಲ್ಲ! ದೇವನದು! ದೇವನದೇ! ಅವನು ಅದನ್ನು ಕಾಣಲಾರದೆ ಹೋ ಎಂದು ಅರಚಿ ಮುಂದೆ ಮುಗುಚಿ ಬಿದ್ದನು.

ಎಚ್ಚರವಾದಾಗ ಅವನು ಮಂಚದ ಮೇಲೆ ಮಲಗಿದ್ದನು- ಪಕ್ಕದಲ್ಲಿ ವಸುಮತಿ ಗಾಬರಿಯಿಂದ ಗಾಳಿಬೀಸುತ್ತ ಕುಳಿತಿದ್ದಳು. ಎಚ್ಚರವಾದೊಡನೆಯೇ ಸುತ್ತಲೂ ನೋಡಿ ಮತ್ತೊಮ್ಮೆ ಹೋ ರಕ್ತ—ರಕ್ತ!— ಎಂದು ಚೀರಿ ತಲೆ ಸವರಿಕೊಂಡು ಕಣ್ಣು ಮುಚ್ಚಿಬಿಟ್ಟನು.

ವಸುಮತಿಗೆ ಇದಾವುದೂ ಅರ್ಥವಾಗಲಿಲ್ಲ. ಹಣೆಯ ಮೇಲೆ ಒದ್ದೆಬಟ್ಟೆಯ ಹೊದಿಕೆಯಿಟ್ಟು ಅಳತೊಡಗಿದಳು. ಅಷ್ಟರಲ್ಲಿ ದೇವನೂ ಬಳಿ ಬಂದು ತಾನೂ ಅಳತೊಡಗಿದನು.

ಶ್ರೀಧರಮೂರ್ತಿ ಮತ್ತೊಮ್ಮೆ ಕಣ್ಣು ತೆರೆದು ಮುಂದುಗಡೆ ಮಗನನ್ನು ಕಂಡು—ಅಯ್ಯೋ ಅಯ್ಯೋ! ಅವನೇ ಅವನೇ! ರಕ್ತ ರಕ್ತ! ಎಂದು ಚೀರಿಕೊಂಡನು: ಇವೆಲ್ಲವನ್ನೂ ಕಂಡು ಪೇದೆ ನಿಂಗಪ್ಪ ಸ್ವಲ್ಪ ಸುಧಾರಿಸಿಕೊಂಡು ಕೇಳಿದ—ನಾನು ಬೇಗ ಹೋಗಿ ಡಾಕ್ಟರರನ್ನು ಕರಕೊಂಡು ಬರಲೆ?

ವಸುಮತಿ ಅಳುತ್ತಲೇ—ಹುಂ ಬೇಗ ಹೋಗಿ ಬಾಪ್ಪ- ಎಂದಳು.

ಶ್ರೀಧರಮೂರ್ತಿ ಮತ್ತೊಮ್ಮೆ ಕಣ್ಣುಬಿಟ್ಟು ಮುಂದೆ ನೋಡುತ್ತ— ರಕ್ತ ರಕ್ತದಹೊಳೆ!—ಎಂದು ಗುಣುಗುಟ್ಟಿ ತಲೆ ಸವರಿಕೊಂಡನು.

ಅರ್ಧ ಗಂಟೆಯನಂತರ ಡಾಕ್ಟರ್ ಉಮೇಶರಾಯರು ಬಂದರು. ಬಂದಾಗ ಅವನ ಮೈ ಕೆಂಡದಂತೆ ಕಾದಿದ್ದಿತು. ಮಧ್ಯೇ ಮಧ್ಯೇ ಮಲಗಿದವನು ಎದ್ದು ಎದ್ದು ತನ್ನಷ್ಟಕ್ಕೆ ಏನೇನೋ ಚೀರುತಿದ್ದನು. ಡಾಕ್ಟರರು ಕೈ ಹಿಡಿದು ನೋಡಿ ಎದೆಬಡಿತವನ್ನು ಲೆಕ್ಕಮಾಡಿ ಏನನ್ನೂ ಕಂಡುಕೊಳ್ಳಲಾರದೆ ವಸುಮತಿಯೊಡನೆ—ಅಳು ಬರಲಿ. ಈ ಹೊತ್ತಿಗೆ ಸಿಪೆಬರು

ವಂತೆ ಸ್ವಲ್ಪ ಮದ್ದು ಕೊಡುತ್ತೇನೆ. ಮೆದುಳು ಉದ್ರೇಕವಾಗಿದೆ. ನಿದ್ದೆ ಬಂದರೆ ಬೆಳಿಗ್ಗೆಗೆ ಎಷ್ಟೋ ವಾಸಿಯಾಗಬಹುದು. ಮತ್ತೆ ನಾಳೆ ನೋಡೋಣ—ಎಂದು ಹೇಳಿ ಹೊರಟು ಹೋದರು.

ಪೇದೆ ನಿಂಗಪ್ಪ ಅವರ ಬೆನ್ನು ಹಿಡಿದು ಹೋಗುವ ಮುಂಚೆ ಮೆಲ್ಲನೆ-ಅಮ್ಮಾ—ಅದೇನೋ ತಾರ್ಕಾಣೆ! ಇದಕ್ಕೆ ಏನಾದರೂ ಚಿನ್ನಗಿನ್ನ ಸೋಳಿದು ಇಡುವುದು ಒಳ್ಳೇದು. ಒಂದು ತೆಂಗಿನಕಾಯೀನ ಸಹ ತೆಗೆದು ಇಡಿರಿ— ಎಂದನು.

ವಸುಮತಿ ನಂಬಿಕೆಯಿಲ್ಲದ ನಂಬಿಕೆಯಿಂದ, ಆಗ ಯಾರ ಮಾತನ್ನಾದರೂ ನಂಬಿಕೊಳ್ಳುವ ಚೇತನದಿಂದ ಹಾಗೆಯೇ ಮಾಡಿ ಉಸಿರುಬಿಟ್ಟಳು.

ಆ ರಾತ್ರಿ ಕಳೆಯಿತು. ಮದ್ದಿನ ಪರಿಣಾಮವಾಗಿ ಚೆನ್ನಾಗಿ ನಿದ್ದೆ ಹತ್ತಿದ್ದಿತು. ಆದರೆ ಮೈ ಕಾವು ಕಳೆದಿದ್ದಿಲ್ಲ. ಅಥವಾ ನಿದ್ರೆಯ ಪರಿಣಾಮವಾಗಿ ಮೆದುಳಿನ ಸುಸ್ಥಿತಿಯೂ ಸಾಧಿಸಿದ್ದಿಲ್ಲ. ಮುಂಜಾನೆ ಎಚ್ಚರವಾದೊಡನೆಯೇ ಕ್ಷೀಣಸ್ವರದಿಂದ—ದೇವ—ದೇವ! ರಕ್ತ ರಕ್ತ!—ಎಂದುಕೊಂಡನು. ಮತ್ತೆ ಕೈ ಹಿಸುಕಿಕೊಳ್ಳುತ್ತ—ಅಯ್ಯೋ ರಕ್ತ ಎಂದು ಚೀರಿದನು.

ವಸುಮತಿ ಬೆನ್ನು ಹಿಡಿದಿದ್ದು ಕೇಳಿದಳು—ಎಲ್ಲಿ ರಕ್ತ?

ಸತ್ತಲೂ ರಕ್ತ, ರಕ್ತದ ಹೊಳೆ! ಪಾಪ—ಸತ್ತೇ ಹೋದ!

ಯಾವಾಗ?

ಯಾವಾಗ? ನಿನ್ನೆ—ನಿನ್ನೆಯೇ!

ಅಷ್ಟರಲ್ಲಿ ಡಾಕ್ಟರರು ಬಂದರು. ಅವನ ಎದೆಯ ಬಡಿತವನ್ನು ಪರೀಕ್ಷಿಸಿ ವಸುಮತಿಯನ್ನು ಈ ಕಡೆ ಕರೆದು—ಏನೋ ಒಮ್ಮಿಂದೊಮ್ಮೆಗ ಮನಸ್ಸಿಗೆ ಉದ್ರೇಕವಾಗಿದೆ. ನಿನ್ನೆ ಏನಾದರೂ ತೊಂದರೆಯಾಗಿದೆಯೆ? ಎಂದು ಕೇಳಿದರು.

ಏನೂ ಇಲ್ಲ ನೋಡಿ. ನಿನ್ನೆ ಸಂಜೆ ಸೈಕಲನ್ನು ಹತ್ತಿ ಯಾಕೋ ಪೇಟೆಗೆ ಹೋಗಿದ್ದರು; ಬಂದಾಗ ಈ ರೀತಿಯಾಗಿದ್ದಿತು.

ಡಾಕ್ಟರರು ಏನೋ ಯೋಚಿಸಿಕೊಂಡು—ಪೇಟೆಗೆ ಹೋಗಿದ್ದರೆ? ಎಷ್ಟು ಹೊತ್ತಿಗೆ?

ಸುಮಾರು ಐದರ ಸಮಯಕ್ಕೆ

ಹಾಗಾದರೆ ನಿನ್ನೆ ಐದು ಗಂಟೆಯ ಹೊತ್ತಿಗೆ ಪೇಟೆಯಲ್ಲಿ ಒಂದು ಮೋಟರು ಅಪಘಡವಾಗಿದ್ದಿತು. ಅದನ್ನು ಹೋಸ್ಪೆಟಲಿಗೆ ಎಡ್ಮಿಟ್ ಮಾಡಿದ್ದಾರಂತ ಕೇಳಿದ್ದೇನೆ. ಅದರ ಪೂರಾ ವಿಷಯ ಗೊತ್ತಿಲ್ಲ. ಆದರೆ ಆ ಹೊತ್ತಿಗೆ ಇವರೂ ಅಲ್ಲಿ ಇದ್ದು ಅದನ್ನು ನೋಡಿರಬೇಕು. ಅದರಿಂದಾಗಿ ಇವರ ಮೃದು ಮನಸ್ಸಿನ ಮೇಲೆ ಪರಿಣಾಮವಾಗಿ ಅದು ಉದ್ರೇಕಗೊಂಡಿದೆ. ಆ ಹೆದರಿಕೆಯಿಂದಾಗಿ ನರ್ವಸ್‌ನೆಸ್ ತೊಡಗಿ ಜ್ವರವೇರಿದೆ. ಅದೇ ಡೆಲಿರಿಯಮ್.

ಆದರೆ ಇದರಲ್ಲಿ ಇವರದ್ದೇನು ಸಂಬಂಧ?

ಡಾಕ್ಟರರು ತುಸು ಯೋಚಿಸಿ ಮೆಲ್ಲನೆ ಹೇಳಿದರು. ನೇರವಾಗಿ ಸಂಬಂಧವಿದೆಯೆಂದು ಅರ್ಥವಲ್ಲ. ಮನುಷ್ಯನ ಹೃದಯ ಸ್ವಾಭಾವಿಕವಾಗಿ ಮೃದುವಾಗಿ ಅಂತಹ ದಕ್ಕೆಗೆ ಹೆದರುತಿದ್ದರೆ ಆರೀತಿಯ ಸಂದರ್ಭ ಅವನ ತಲೆಯನ್ನು ಹಾಳುಮಾಡಿ ಬಿಡುತ್ತದೆ. ಆದರೆ—ಇವರ ಹೃದಯವು ಅಷ್ಟೊ ಮೃದುವೋ—ಎಂತನನಗೆ ಭಾರೀ ಸಂಶಯ ಬರುತ್ತದೆ. ಅಥವಾ ಇವರಿಗೆ ಈ ಮೊದಲು ಏನೋ ಕಾರಣದಿಂದಾಗಿ ಅಥವಾ ಕಾಯಿಲೆಯಿಂದಾಗಿ ದುರ್ಬಲವಾಗಿರಬೇಕು. ಅದನ್ನು ತಿಳಿಯಬೇಕಾಗಿದೆ.

ನನ್ನ ತಿಳುವಳಿಕೆಯಲ್ಲಿ ಅದೇನೂ ನಡೆದದ್ದು ಗೊತ್ತಿಲ್ಲ.

ಹಾಗಾದರೆ ನಿನ್ನೆ ಮೋಟರು ತಾಗಿ ಬಿದ್ದವನು ನಿಮಗೇನಾದರೂ ಸಂಬಂಧವಾಗಿಲ್ಲವಲ್ಲ?

ನಮಗೆ ಈ ಊರೊಳಗೆ ಸಂಬಂಧಿತರೇ ಇಲ್ಲ. ಏನು? ಆ ಮನುಷ್ಯ ತೀರಿಹೋದನೆ?

ಅದು ಗೊತ್ತಿಲ್ಲ. ಹೋಸ್ಪೆಟಲ್ ಕೇಸಿನಕಡೆ ನಾವು ಹೆಚ್ಚು ನಿಗಾ ಕೊಡುವುದಿಲ್ಲ ನೋಡಿ! ಆದರೆ ಬಹಳ ಕ್ರಿಟಿಕಲ್ ಎಂತ ಕೇಳಿದ್ದೇನೆ. ಈಗಂತೂ ರಾಯರಿಗೆ ತುಂಬಾ ವಿರಾಮ ಬೇಕು. ನಿದ್ದೆಗೆ ತೊಂದರೆಯಾಗಬಾರದು. ಮತ್ತೆ ಬೇರೆ ಮದ್ದು ಕಳುಹಿಸುತ್ತೇನೆ. ಸಂಜೆ ಬರು

ತ್ತೇನೆ. ಮತ್ತೊಂದು ವಿಚಾರ—ಆ ಪೆಟ್ಟಾದ ಮನುಷ್ಯನಿಗೆ ಏನೂ ಗಾಬರಿಯಾಗಲಿಲ್ಲ ಎಂಬುದು ತಿಳಿದಾಗ ಇವರ ಮೆದುಳಿಗೆ ಸುಸ್ಥಿತಿಯಾಗಲೂ ಸಾಧ್ಯವಿದೆ—ಎಂದು ಹೇಳಿ ಹೊರಟುಹೋದರು.

ವಸುಮತಿಗೆ ಇದಾವುದರ ನೆಲೆಯೂ ಆಗಲಿಲ್ಲ. ಅಂತಹ ಮೋಟರ ಅಪಘಡದಿಂದಾಗಿ ತನ್ನ ಗಂಡನ ತಲೆಯೇಕೆ ಕೆಡಬೇಕು? ಯಾರನ್ನು ಯಾರೋ ಕೊಂದುಬಿಟ್ಟರೆ ಇವರೇಕೆ ಮಗನ ಹೆಸರುಕೂಗಿ ಕರೆಯಬೇಕು? ಎಲ್ಲದಕ್ಕೂ ಮುಂಚೆ ಆ ಸತ್ತ ಜನ ಯಾರೆಂದು ತಿಳಿಯಬೇಕೆಂದು ಯೋಚಿಸಿ ಆಸ್ಪತ್ರೆಯ ಕಡೆ ನಿಂಗನನ್ನು ಕಳುಹಿಸಿದಳು.

ಇಷ್ಟುಹೊತ್ತಿಗೆ ಶ್ರೀಧರಮೂರ್ತಿಯ ಸ್ಥಿತಿಯೇನೂ ಸುಧಾರಿಸಿದ್ದಿಲ್ಲ-ತನ್ನ ಮುಂದೆ ರಕ್ತದಲ್ಲಿ ತೇಲುವ ಹೆಣವನ್ನು ಕಂಡವನಂತೆ ಬೆಚ್ಚಿ ಬೀಳುತ್ತಿದ್ದನು. ಮಗನು ಬಳಿಬಂದಾಗಲೆಲ್ಲಾ ಆಶ್ಚರ್ಯದಿಂದ ಮುಖನೋಡಿ ಮತ್ತೆ ಬದುಕಿ ಬಂದವನನ್ನು ಬಿಗಿಯಾಗಿ ಹಿಡಿವಂತೆ ಕೈ ಹಿಡಿದುಕೊಳ್ಳುತ್ತಿದ್ದನು.

ಕೊಲೆಪಾತಕವು ಯಾರ ಬೆನ್ನುಬಿಟ್ಟಿದೆ? ಕೊಲೆಗಡುಕನನ್ನು ಪ್ರಪಂಚವೇ ಮರೆಯಬಹುದು—ಅಥವಾ ಅರಿಯದಿರಬಹುದು. ಆದರೆ ಅವನ್ನು ಅರಿತ ಅಂತರಾತ್ಮನನ್ನು ಮರೆಮಾಸಲು ಸಾಧ್ಯವಿದೆಯೆ? ಆಗ ಅವನ ಕರಿನೆರಳನ್ನು ಅವನೇ ಕಂಡುಕೊಂಡು ಬೆದರಿ ಬೀಳುವನು. ಅವನ ಆತ್ಮನ ಮೇಲಣ ದುರಾತ್ಮನ ಕೈ ಬಿಗಿತವು ಕಳಚಿದಾಗ ತಾನೇ ತನ್ನ ಮುಂದೆ ಪಾಪಕ್ಕಾಗಿ ಅಪರಾಧಿಯಾಗಿ ನಿಲ್ಲುವನು. ಅದಕ್ಕೆ ನ್ಯಾಯಾಲಯ ಬೇಕಾಗಿಲ್ಲ. ಸಾಕ್ಷ್ಯದ ಅಗತ್ಯವಿಲ್ಲ. ತೀರ್ಪಿನ ಆವಶ್ಯಕತೆಯಿಲ್ಲ. ಅವನ ಹೃದಯದ ನ್ಯಾಯಸ್ಥಾನದಲ್ಲಿ ಅವನದೆ ಸಾಕ್ಷ್ಯವು ನಡೆದು ಅವನೇ ತಪ್ಪನ್ನು ನಿರ್ಣಯಿಸಿಕೊಂಡು ಶಿಕ್ಷೆಯನ್ನು ಅನುಭವಿಸುವನು. ಅದೇ ಪಾಪದ ಹೊರೆ!

ಅಂತೆಯೇ ಶ್ರೀಧರಮೂರ್ತಿಯು ತನ್ನ ಮಾನಸಿಕ ವಿಚಾರಣೆಯಲ್ಲಿ ತಾನೇ ತಪ್ಪುಗಾರನೆಂಬುದಾಗಿ ಶಿಕ್ಷೆಯನ್ನು ಅನುಭವಿಸಿಯೇ ಅನುಭವಿಸಿದನು. ಸ್ವಾರ್ಥದ ಕಲ್ಪನೆಯಿಂದ ಕ್ರೂರ ಪ್ರಾಣಿಯಾಗಿ ಹೆರರ ಮೇಲೆ

ಚಿಗಿವ ಜೀವವು ಮತ್ತೆ ಮನುಷ್ಯನಾಗಿ ಗತಿಗೆಟ್ಟು ಗೋಳಾಡುವುದು. ಅಂತಹ ಗೋಳಾಟವು ಬೇರೆಯವರಿಗೆ ವಿಚಿತ್ರವಾಗಿ ಕಾಣಬಹುದು. ಆದರೆ ಅವರ ಅರ್ಥವನ್ನು ಚಿಗಿವ ಪ್ರಾಣಿಯೊಡನೆಯೇ ಕೇಳಿಕೊಳ್ಳಬೇಕು. ಎಲ್ಲರೂ ಅಂತಹ ಪ್ರಾಣಿಯಾಗಲೊಲ್ಲರು. ಕೆಲವರು ಪ್ರಾಣಿಯಾಗಿ ಮತ್ತೆ ವಿಚಾರದ ಪಂಜರ ಸೇರುವರು. ಒಮ್ಮೆ ಪ್ರಾಣಿಯಾಗಿ ಮತ್ತೆ ಯಾವತ್ತಿಗೂ ಹಾಗೆಯೇ ಉಳಿಯುವವರೂ ಹಲವು ಮಂದಿ! ಸದ್ಯ ಶ್ರೀಧರನು ಒಮ್ಮೆ ಪ್ರಾಣಿಯಾಗಿ ಮೇಲ್ನೆಗೆದು ಪಂಜರ ಸೇರಿ ಅದಕ್ಕೆ ಬೆಲೆಗೊಟ್ಟು ಪರಿತಪಿಸುತ್ತಿದ್ದನು.

ಸಿಂಗಪ್ಪನು ಆಸ್ಪತ್ರೆಯಿಂದ ಮರಳಿ ಬಂದು ಈ ಸುದ್ದಿಯನ್ನು ಹೇಳಿದನು—ಅಮ್ಮಾ—ಅಂದು ನಮ್ಮ ಮರಿರಾಯರ ಹಾಗೆ ಇದ್ದಾನೆಂದಿದ್ದೆನಲ್ಲ—ಪೆಟ್ಟಾದವ ಅದೇ ಹುಡುಗ!

ವಸುಮತಿಯು—ಹಾಂ—ಎಂದು ಕಣ್ಣು ಕಣ್ಣು ಬಿಟ್ಟಳು. ಮತ್ತೆ ಕೇಳಿದಳು—ಹುಡುಗ ಹೇಗಿದ್ದಾನೆ?

ಇದ್ದಾನೆ. ಅಂತೂ ತಲೆಗೆ ಬಹಳ ಪೆಟ್ಟಾಗಿದೆ.

ಡಾಕ್ಟರರು ಬಂದಾಗ ಆಕೆ ಅದೇ ಸುದ್ದಿಯನ್ನು ಅವರೊಡನೆ ತಿಳಿಸಿದಳು. ಪೆಟ್ಟಾದವ ನಮ್ಮ ದೇವನ ಹಾಗೆ ಚಿಕ್ಕ ಹುಡುಗ. ಬದುಕಿದ್ದಾನಂತೆ.

ಡಾಕ್ಟರರು ಒಮ್ಮೆ ಉಸಿರುಬಿಟ್ಟು—ಪರವಾಯಿಲ್ಲ. ಆ ಹುಡುಗ ಬಿದ್ದುದನ್ನು ಕಂಡಾಗ ರಾಯರಿಗೆ ಮಗನೆಂದೇ ಕಣ್ಣು ಕಟ್ಟಿದಂತಾಯಿತು. ಇದಕ್ಕೆಲ್ಲ ಆ ಭ್ರಮೆಯೇ ಕಾರಣ. ಆದರೆ ಹುಡುಗ ಬದುಕಿರುವುದರಿಂದ ಎಲ್ಲಾ ಸರಿಹೋಗಬಹುದು. ಅದನ್ನು ನಾನೇ ಅವರಿಗೆ ತಿಳಿಸುತ್ತೇನೆ ಎಂದು ಒಳಗಡೆ ಹೋದರು.

ಮಿಸ್ಟರ್ ಶ್ರೀಧರರಾವ್! ನೀವು ಮೊನ್ನೆ ಪೆಟ್ಟಾಯಿತು ಎಂತ ಗಾಬರಿಯಾಗಿದ್ದಿರಲ್ಲ ಆ ಹುಡುಗ ಚೆನ್ನಾಗಿಯೇ ಇದ್ದಾನೆ. ಏನೂ ಗಾಬರಿಯಿಲ್ಲ.

ಶ್ರೀಧರಮೂರ್ತಿಯು ಒಮ್ಮೆ ಕಣ್ಣು ಅರಳಿಸಿಕೊಂಡು ಉದ್ರೇಕದಿಂದ—ಆ ಹುಡುಗ—ದೇವ—ಎಂದನು.

ಹೌದು ಚೆನ್ನಾಗಿದ್ದಾನೆ. ನಿಮ್ಮ ದೇವನ ಹಾಗೆ ಹುಶಾರಿದ್ದಾನೆ. ನೀವು ಅಂಜಬೇಕಾಗಿಲ್ಲ.

ಶ್ರೀಧರನು ಮತ್ತೊಮ್ಮೆ ಡಾಕ್ಟರರನ್ನು ದುರದುರನೆ ನೋಡುತ್ತ ಅವರೆಡೆಗೆ ಕೈ ತೋರಿಸಿದನು.

ಹೌದು. ನಾನೇ ಕಂಡಿದ್ದೇನೆ. ನೀವೇನೂ ಚಿಂತಿಸಬೇಕಾಗಿಲ್ಲ. ನಿಮ್ಮ ಹುಡುಗ ಹೇಗಿದ್ದಾನೋ ಹಾಗೇನೇ ಸುಖವಾಗಿದ್ದಾನೆ ಎಂದು ವಿರಳವಾಗಿ ಹೇಳಿದರು.

ಅವನು ಡಾಕ್ಟರರನ್ನು ನೋಡಿ ಉಸಿರುಬಿಟ್ಟು ಕಣ್ಣು ಮುಚ್ಚಿಕೊಂಡನು. ಅದು ತುಫಾನಿನ ನಂತರ ಸಮುದ್ರವು ಸ್ತಬ್ಧವಾದರೀತಿ!

ಡಾಕ್ಟರರು ಹೊರಗೆ ಬಂದು ವಸುಮತಿಯೊಡನೆ—ದೇವರು ನಿಮ್ಮನ್ನು ಕಾಪಾಡಿದ್ದಾನಮ್ಮ. ಇನ್ನೇನೂ ಅಂಜಿಕೆಯಿಲ್ಲ. ಒಮ್ಮೆಗೇ ಮನಸ್ಸಿಗೆ ಶೋಕ್ ಆದ್ದರಿಂದ ಕ್ರಮೇಣ ಸುಧಾರಿಸಬೇಕಾಗಿದೆ. ನೋಡಿಯಮ್ಮ! ಇಷ್ಟು ವಿಚಾರಗಳೆಲ್ಲ ತಿಳಿದದ್ದರಿಂದ ಬೇಗನೇ ಇವುಗಳನೆಲ್ಲ ಸುಧಾರಿಸಲಿಕ್ಕೆ ಸಹಾಯವಾಯಿತು. ಅಲ್ಲವಾಗಿದ್ದರೆ ಸತ್ಯಸಂಗತಿ ತಿಳಿಯಲಿಕ್ಕಾಗಿ ದೊಡ್ಡ ಶಹರುಗಳಲ್ಲಿ ಮಾಡಿದಂತೆ 'Sodium pentothal' ಉಪಯೋಗಿಸಬೇಕಿತ್ತು. ಆದರೆ ಅವೆಲ್ಲ ನಮ್ಮ ಊರಲ್ಲಿ ಸಾಧ್ಯಬರಲಿಕ್ಕಿಲ್ಲ. ಅಂತೂ ದೇವರ ಕೃಪೆ ಚೆನ್ನಾಗಿದ್ದಿತು ಅಷ್ಟೆ!

ಇನ್ನುಮೇಲೆ?

ಇನ್ನುಮೇಲೆ ವಿಶೇಷವೇನೂ ಬೇಕಾಗಿಲ್ಲ. ಮುಖ್ಯವಾಗಿ ವಿಶ್ರಾಂತಿ. ನಂತರ ಪೆನ್ಸಿಲಿನ್ ಕೊಡಬಹುದು. ಅದರಿಂದಾಗಿ ಒಮ್ಮೆ ಉತ್ತೇಜಿತವಾದ ನರಗಳು ಸಮತೆಯಲ್ಲಿ ಕೆಲಸ ಮಾಡುತ್ತವೆ ಎಂದು ಸೂಚಿಸಿ ತೆರಳಿದರು.

ಶ್ರೀಧರಮೂರ್ತಿಯ ಪರಿಸ್ಥಿತಿಯು ದಿನೇ ದಿನೇ ಮಾರ್ಪಾಟಗೊಳ್ಳುತ್ತ ಬಂದಿತು. ಒಂದು ದೊಡ್ಡ ಹೊರೆಯನ್ನು ಮೆಲ್ಲ ಮೆಲ್ಲನೆ ಕೆಳ

ಗಿಳಿಸುವ ರೀತಿಯಲ್ಲಿದ್ದಿತು ಅವನ ಸ್ಥಿತಿ. ಚಿಪ್ಪಿನೊಳಕ್ಕೆ ಹುದುಗಿದ್ದ ಆವೆಯು ತಾನೇ ತಾನೇ ಹೊರಬರುತ್ತ ಪ್ರಪಂಚವನ್ನು ಕಾಣುವ ರೀತಿ ಅವನ ಮನಸ್ಸು ಕತ್ತಲಿನಿಂದ ಬೆಳಕಿಗೆ ಕೋಣೆಯಿಂದ ಹೆಬ್ಬಾಗಿಲಿಗೆ ಹರಡುತಿದ್ದಿತು. ಒಂದು ವಾರಗಳ ಕಾಲ ಸ್ತಬ್ಧವಾಗಿ ನಿಶ್ಚೇತನವಾಗಿದ್ದುದು ಮತ್ತೆ ನಿಧಾನವಾಗಿ ಸುತ್ತುಮುತ್ತಲಿನ ಪರಿಸ್ಥಿತಿಯನ್ನು ಗ್ರಹಿಸಿ ಕೊಳ್ಳಲು ಸಮರ್ಥವಾಯಿತು. ದೇವನನ್ನು ಕಂಡೊಡನೆಯೇ ಬೆವರಿ ಬಿಗಿಹಿಡಿಯುತಿದ್ದ ಭಾವನೆಯು ಕಾಲಕ್ರಮೇಣ ಕಳೆದು ಪೂರ್ಣ ಮಮತೆಯಲ್ಲಿ ಪರಿಣಾಮಕಾರಿಯಾಗಿ ನಿಂತಿತು. ಒಂದು ಕ್ಷಣವೂ ಅವನು ಬಳಿಯಿಂದ ಸರಿದಿರಲಾಗದು.

ಒಂದು ತಿಂಗಳ ವೇಳೆಯಲ್ಲಿ ಅವನು ತೀರಾ ಸ್ವಾಸ್ಥ್ಯಗೊಂಡು ಕೆಲಸಕ್ಕೆ ಹಾಜರಾದನು.

## ಎಸಳು ೯ — ಆತ್ಮಾವಲೋಕನ

ಶ್ರೀಧರಮೂರ್ತಿಯು ಆ ದಿವಸ ಮನೆ ಸೇರಿದಾಗ ಬಹಳ ಬೇಸತ್ತವನಂತೆ ಬಂದಿದ್ದನು. ಬಂದವನು ಎಂದಿನಂತೆ ಮಗನೊಡನೆ ಚೆಲ್ಲಾಟವಾಡುವುದನ್ನು ಬಿಟ್ಟು ಮೇಜಿನ ಮುಂದೆ ಕುಳಿತು ಒಂದು ಕಾಗದದ ಚೂರಿನಲ್ಲಿ ಒಂದು ನೀಟವಾದ ಗೆರೆಯೆಳೆಯುತ್ತ ಅದರ ಕೆಳಗಡೆ ಮತ್ತೊಂದು ಸಮರೇಖೆಯನ್ನು ಎಳೆದು ಮುಂದಕ್ಕೆ ಅವೆರಡನ್ನೂ ಕೂಡಿಸಿಬಿಡುತ್ತಿದ್ದನು. ಹೀಗೆ ಎಷ್ಟೋ ಕಾಗದದ ಚೂರುಗಳಲ್ಲಿ ಕೀರಿಯಾಯಿತು. ಈ ಮಧ್ಯದಲ್ಲಿ ದೇವನು ಎಂದಿನಂತೆ ಬಂದು ಅವುಗಳನ್ನೆಲ್ಲಾ ಹೆಕ್ಕಿ ತಾನೂ ಗೀಚತೊಡಗಿದಾಗ ಆ ಕಾಗದಗಳನ್ನೆಲ್ಲ ಕಸಿದುಕೊಂಡು ಬೇಡಪ್ಪ. ನೀನು ಮುಟ್ಟಬೇಡ. ಅದು ಬೆಂಕಿ! ಕೈ ಸುಟ್ಟೀತು—ಎಂದು ಗಾಬರಿಯಿಂದ ಹರಿದು ಬಿಸುಡುತ್ತಿದ್ದನು.

ಇದನ್ನು ಕಾಫಿ ತಿಂಡಿಯನ್ನು ತರುತ್ತ ದೂರದಿಂದಲೇ ಅವನ ಹೆಂಡತಿಯು ಕಂಡುಕೊಂಡಳು.

ಮರುದಿನ ಮುಂಜಾನೆ ವಸುಮತಿಯು ನಿಂಗಪ್ಪನೊಡನೆ ಮೆಲ್ಲನೆ ಕೇಳಿದಳು—ನಿನ್ನೆ ಕೋರ್ಟಿನಲ್ಲೇನು ವಿಶೇಷವಿತ್ತು?

ಏನಿಲ್ಲಮ್ಮ.

ಏನಾದರೂ ದೊಡ್ಡ ದೊಡ್ಡ ಕೇಸುಗಳು—

ಹಾಂ ಒಂದು ವಿಚಾರಣೆಯಿದ್ದಿತು. ಮತ್ತೆ ಮೊನ್ನೆ ಆ ಮೋಟಾರಿನ ಪೆಟ್ಟಾಯಿತಲ್ಲ ಅದರ ಪೋಲೀಸು ಕೇಸು ಎಡ್ಮಿಟ್ ಆಗಿತ್ತು.

ವಸುಮತಿ ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ—ಹೌದನಾ! ಆ ಹುಡುಗನ ಮನೆ ಗೊತ್ತೇ ನಿನಗೆ?

ಹೌದು. ಆ ರಸ್ತೇಲಿ ಹೊಸಮನೆ

ಅದು ಯಾರ ಮನೆ ಗೊತ್ತೆ?

ಪೂರಾ ಗೊತ್ತಿಲ್ಲ. ಕೇಳಿ ತಿಳಿಯಬೇಕೆ?

ಬೇಡ. ನಾಳೆ ಭಾನುವಾರ ನೋಡು. ರಾಯರು ದೇವ ಸೀನೆಮಕ್ಕೆ ಮೆಟನಿಗೆ ಹೋಗುತ್ತಾರೆ. ನೀನು ಸಾಯಂಕಾಲ ಮೂರು ಗಂಟೆಗೆ ತಯಾರಿರಬೇಕು. ನನಗೆ ಪೇಟೆಗೆ ಹೋಗುವ ಕೆಲಸವಿದೆ. ಆ ಕಸೂತಿ ಶಾರದಮ್ಮನವರಿಗೆ ವಾಪಾಸು ಕೊಟ್ಟು ಬರಬೇಕು.

ವಸುಮತಿಯು ವಿಚಾರಕ್ಕೆ ಈ ವಿಷಯವು ನಿಶ್ಚಯವಾಗಿದ್ದಿತು. ಆ ಹುಡುಗನ ಬರೇ ರೂಪ ಸಾದೃಶ್ಯ ಮಾತ್ರವಲ್ಲ, ಅದಕ್ಕೂ ಮಿಕ್ಕಿದ ಸಂಬಂಧ ಇವರಲ್ಲೇನೋ ಅಡಕವಾಗಿರಬೇಕು. ಇಂತಹ ಸಂದರ್ಭಗಳಿಂದಾಗಿ ಇವರ ತಲೆ ಕೆಡುವುದಾದರೆ ಅದು ಮಾನವ ಸಹಜವಾದ ಮಾರ್ದವ ಮಾತ್ರವಲ್ಲ, ಅದಕ್ಕೂ ಹೆಚ್ಚಿನ ಕರುಳಿನ ಕನಿಕರವು ಹೃದಯ ಸ್ಪರ್ಶಿಯಾಗಿರಬೇಕು. ಇದೊಂದು ಸಮಸ್ಯೆ. ಇದನ್ನು ತಿಳಿದುಕೊಳ್ಳದೆ ಯಾವುದೂ ಪರಿಹಾರವಾಗುವಂತಿಲ್ಲ—ಎಂದೇ ಅವಳು ಅದರ ಶೋಧನೆಯತ್ತ ಮನಸ್ಸುಗೊಟ್ಟಳು.

ಹೆಂಗುಸಿನ ಮನಸ್ಸೇ ಸಂಶಯಾಸ್ಪದವಿದೆ. ಅದು ಸ್ನೇಹ ಪೂರ್ಣವಿರುವುದರಿಂದ ಅದಕ್ಕೆ ಹತ್ತಿದ ವಿಚಾರಗಳು ಅಂತೆಯೇ ಉಳಿದು ಬಿಡುವುವು. ಮತ್ತೆ ಅದರ ಶೋಧನೆಗೆ ತೊಡಗುವುದೂ ಅದೇ ಸ್ನೇಹದ ಪರಿಣಾಮ. ಪ್ರೀತಿಯು ಕತ್ತಲು ಕೋಣೆಯ ದೀಪದಂತೆ! ಕತ್ತಲು ಹೆಚ್ಚಿದಷ್ಟು ದೀಪದ ಪ್ರಭೆಯೂ ಹೆಚ್ಚುವುದು. ಆ ದೀಪದ ಪ್ರಕಾಶದಲ್ಲಿ ಏನನ್ನೆಲ್ಲಾ ಕಾಣಬೇಕೋ ಅದನ್ನು ಹೃದಯವು ಕಂಡೇ ಕಾಣುವುದು. ಮತ್ತೆ ಕಾಣದಿರುವ ಭಾಗವನ್ನು ಕೆಲವೊಮ್ಮೆ ಕಾಣುವ ಹವ್ಯಾಸಕ್ಕೆ ತೊಡಗುವುದಿದೆಯಲ್ಲ ಅದೂ ಪ್ರೀತಿಯ ಸಹಜವಾದ ಕುತೂಹಲ! ಅಂತಹ ಕುತೂಹಲವೇ ಹೆಂಗುಸಿನ ಪ್ರೇಮದ ವೈವಿಧ್ಯ!

ಕುತೂಹಲವು ಯಾವತ್ತಿಗೂ ಹಿತಕರವಾಗುವಂತಿಲ್ಲ. ಕಾರಣ ಜೀವನದ-ಅಂತರ್ಭಾಗವು ಯಾವತ್ತಿಗೂ ನುಣುಪಾಗಿರುವುದಿಲ್ಲ. ಆದುದರಿಂದ ಅಂತಹ ಒರಟುತನವನ್ನು ಅನುಭವಿಸುವ ವೇಳೆ ಸಹನೆಯಿಲ್ಲವಾದರೆ ಅಸೂಯೆಯು ಎಂತಹ ಆಶಾವಾದಿಯನ್ನಾದರೂ ತಲೆಗೆಡಿಸುವುದು. ಹೀಗಿದ್ದರೂ ಒಂದು ಹೆಂಗುಸಿನೊಡನೆ ಚಿಕ್ಕಿನ ಸಿಕ್ಕೆಯೊಡನೆ ಹೇಗೋ ಹಾಗೆ ಕುತೂಹಲದ ಕುರಿತು ಪ್ರಶ್ನೆ ಕೇಳಲಾಗದು.

ವಸುಮತಿಯು ಇಂತಹ ಶೋಧನೆಗೆ ಹೊರಟುದು ಕುತೂಹಲ ದೃಷ್ಟಿಮಾತ್ರದಿಂದಲ್ಲ-ಅಗತ್ಯದ ದೃಷ್ಟಿಯಿಂದ. ಅದು ರೋಗಿಯ ಒಳನಾಡಿಯನ್ನು ಪರೀಕ್ಷಿಸಲೆಳಸಿದ ವೈದ್ಯನ ಪ್ರವೃತ್ತಿಯಂತೆ. ಆಕೆ ಪೇದೆ ನಿಂಗಪ್ಪನನ್ನು ಆ ಮನೆಯ ಗೇಟಿನ ಬಳಿಯಿಂದಲೇ ಹಿಂದೆ ಕಳುಹಿಸಿಕೊಟ್ಟು ತಾನು ಮಾತ್ರ ಒಳಹೊಕ್ಕಿದಳು.

ಗಂಟೆ ನಾಲ್ಕು ಹೊಡೆದಿರಬಹುದು. ಅಂಬುಜಾಕ್ಷಿಯು ಉಪ್ಪರಿಗೆಯ ಮೇಲೆ ಚಿಕ್ಕ ಕೋಣೆಯೊಂದನ್ನು ಸ್ವಚ್ಛಗೊಳಿಸುತ್ತಿದ್ದಳು. ಆ ಕಡೆಯ ಚಿಕ್ಕ ಮಂಚವನ್ನು ಹಾಸಿ ಸರಿಪಡಿಸುತ್ತಿದ್ದಳು. ಮೇಜಿನ ಮೇಲಿನ ಶಾಲಾ ಪುಸ್ತಕಗಳನ್ನು ತೆಗೆದಿಟ್ಟು ದೂಳು ಜಾಡಿಸುತ್ತಿದ್ದಳು. ಹಾಗೆಯೇ ಕ್ಷಣಕಾಲನಿಂತಿದ್ದು ಮುಂದುಗಡೆಯ ಪಟದ ಕಡೆ ಕಣ್ಣು ಹಾಯಿಸಿದಳು. ಅದು ಅವಳ ಮೂರ್ತಿ—ಕೃಷ್ಣಮೂರ್ತಿ. ಅವಳ ಹೃದಯದ ಆದರ್ಶದ ಮುದ್ದು ಮಗು. ಹೆಂಗುಸಿನ ಆದರ್ಶದ ಅಧಃಪಾತವು ಅವಶ್ಯವಾಗಿ ನಡೆದಿರಬಹುದು. ಆದರೆ ಅದರ ಅನುಭವವು ಮಾತ್ರ ಅಂತಹ ಕುರುಹನ್ನು ಪವಿತ್ರ ಸ್ಮಾರಕವನ್ನಾಗಿ ತಿಳಿದು ಪೂಜಿಸುವುದು. ಅದು ತಾಯಿ ಮಗನ ಸಂಬಂಧ ಮಾತ್ರವಲ್ಲ. ದೈವ ಮಾನುಷ ಸಂಬಂಧ! ಆ ಪಾವಿತ್ರ್ಯದ ಮೇಲೆ ಪೂಜ್ಯತೆಯಿಟ್ಟು ಕಲ್ಪನೆಯು ಆದರ್ಶಕ್ಕಾಗಿ ಕಣ್ಣೀರು ತುಂಬುವುದು. ಮನಸ್ಸು ತೋಡಿಕೊಳ್ಳುವುದು. ಏಕೆಂದರೆ ಅದು ಅವರ ಅಭಿಮಾನ. ಹೂವು ಬಾಡಿ ಬಿದ್ದಿದ್ದರೂ ಪೂರ್ವ ಪರಿಮಳವು ಅವರ ಬಾಳನ್ನು ಸಾರ್ಥಕಗೊಳಿಸುವುದಿಲ್ಲವೆಂದವರಾರು?

ಅಂಬುಜಾಕ್ಷಿಯು ತನ್ನ ಮಗನ ಮೇಲಣ ಮೋಟರಿನ ಅಪಘಡವನ್ನು ಮಮತೆಯ ಸ್ಥೂಲದೃಷ್ಟಿಯಿಂದ ಮಾತ್ರವಲ್ಲ ಆತ್ಮದ ಮೌನದೃಷ್ಟಿಯಿಂದಲೂ ಕಂಡು ಕಂಡು ದುಃಖಿಸುತಿದ್ದಳು. ಕಾರಣ- -ಅದು ಅವಳ ಮನೋಮಂದಿರದ ಮೂರ್ತಿಭಂಗ. ಆದರ್ಶಕ್ಕಾಗಿ ಅವಳು ಎಷ್ಟು ಹೋರಾಡಿಲ್ಲ? ಅದರ ಪುಣ್ಯಪೂಜೆಗಾಗಿ ಅವಳು ತನ್ನ ಭಾವನೆಗಳನ್ನು ಎಷ್ಟು ಹಸನುಗೊಳಿಸಿಲ್ಲ? ಅದರಲ್ಲಿ ಅವಳ ಅಪಜಯವಾಗಿದ್ದರೆ ಚಿಂತಿಲ್ಲ. ಅಂದಿನ ಕ್ಷಣಿಕ ವಿಜಯದ ಪ್ರತೀಕವಾಗಿ ನಿಂತಿರುವನಲ್ಲ—ಮೂರ್ತಿ? ಅವನ ಬಾಳು ತನ್ನ ಇಂದಿನ ಕೀಳ್ಮಟ್ಟಕ್ಕೆ ಮೀರಿದುದು. ಅದನ್ನು ಅಂತೆಯೆ ಹೆಚ್ಚಿರಿಸಬೇಕೆಂದು ಹವಣಿಸಿ ಹೋರಾಡುತಿದ್ದಳವಳು. ಇನ್ನು ಆ ಹೋರಾಟವನ್ನು ಯಾರಿಗಾಗಿ ಹೊತ್ತಿಸಬೇಕೆಂದು ದಿಕ್ಕುಗಾಣದಾದಳು. ಆದರೆ ಈಗಲೀಗ ಅವಳ ಮುದ್ದುಮೂರ್ತಿಯು ಗುಣಮುಖನಾಗುತಿರುವನು. ಏಕೆ? ನಾಳೆಯೇ ಮನೆಗೆ ಕರೆದುಕೊಂಡು ಹೋಗಬಹುದೆಂದು ಆಸ್ಪತ್ರೆಯಲ್ಲಿ ಡಾಕ್ಟರರು ಮೊನ್ನೆಯೇ ಹೇಳಿರುವರು. ಆದುದರಿಂದಲೇ ತನ್ನ ಮೂರ್ತಿ ತನ್ನ ಮಂದಿರಕ್ಕೆ ಬರುವನೆಂದು ಅವಳು ಎಲ್ಲವನ್ನೂ ಸಜ್ಜಾಗಿಸುತಿದ್ದಳು. ಆತ್ಮಾನಂದದಿಂದ ತನ್ನಷ್ಟಕ್ಕೆ ತಾನೇ ಗುಣುಗುಟ್ಟುತಿದ್ದಳು.

ಆಗ ಕೆಲಸದವಳು ಬಂದು ಯಾರೋ ಹೆಂಗಸು ಬಾಗಿಲ ಕಡೆ ಬಂದಿದ್ದಾರೆಂದು ತಿಳಿಸಿದಳು. ಅಂಬುಜಾಕ್ಷಿ ಕೆಳಗಿಳಿದು ಬಂದು ವಸುಮತಿಯ ಮುಖ ನುಖ ನೋಡುತ್ತ—ಒಳಗೆ ಬರಬೇಕು ಹೀಗೆ—ಎಂದು ಬರಹೇಳಿ ಕುರ್ಚಿ ತೋರಿಸಿದಳು.

ವಸುಮತಿಯು ಕುಳಿತುಕೊಳ್ಳುವ ಮುಂಚಿತವಾಗಿ—ನಿಮಗೆ ನನ್ನ ಗುರುತು ಇರಲಿಕ್ಕೆ ಸಾಧ್ಯವಿಲ್ಲ. ಹೀಗಾಗಿ ನಾನು ಬಂದುದು ನಿಮಗೆ ಆಶ್ಚರ್ಯವಾಗಬಹುದು. ಆದರೆ ನಿಮ್ಮ ಹುಡುಗನಿಗೆ ಪೆಟ್ಟಾದುದನ್ನು ನಾನು ಕೇಳಿದ್ದೇನೆ. ಈಗ ಹೇಗಿದೆ ಅವನಿಗೆ? ಎಂದಳು.

ಅಂಬುಜಾಕ್ಷಿಯು ಆದರದಿಂದ ಕೈ ಮುಗಿದು—ನಿಮ್ಮ ಆಶೀರ್ವಾದದಿಂದ ಕ್ಷೇಮವಾಗುತ್ತಾಯಿದ್ದಾನೆ.

ಈಗ ಎಲ್ಲಿದ್ದಾನೆ? ತೋರೋದಿಲ್ಲವಲ್ಲ?

ಇಲ್ಲ. ಇನ್ನೂ ಆಸ್ಪತ್ರೆಯಿಂದ ಕರೆದುಕೊಂಡು ಬಂದಿಲ್ಲ. ನಾಳೆ ನಮ್ಮ ಮೂರ್ತಿಯ ಮನೆಗೆ ಕರಕೊಂಡು ಬರಬೇಕೂಂತ ಇದ್ದೇವೆ. ಹೇಗಾದರೂ ಒಮ್ಮೆಗೆ ದೇವರು ಪಾರುಮಾಡಿದನಮ್ಮ—ನಮ್ಮ ಮೂರ್ತಿಯನ! ದೇವರು ದೊಡ್ಡವ!—ಎಂದು ದೇವರಿಗೆ ಆಭಾರ ಅರ್ಪಿಸುವಂತೆ ಮೌನ ವಿದ್ದು ಮತ್ತೆ ಎಚ್ಚರಗೊಂಡವಳಂತೆ—ಮತ್ತೆ ನೀವು ನಿಮ್ಮ ಪರಿಚಯ ತಿಳಿ ಸಲೇಯಿಲ್ಲವಲ್ಲ? ನೀವು ಈ ಊರವರಾಗಿದ್ದರೆ ನನಗೆ ಹೇಗೂ ಮೊದಲೇ ಪರಿಚಯವಾಗುತಿದ್ದಿತು. ನೀವು ಈ ಊರವರಂತೆ ಕಾಣೋದಿಲ್ಲ.

ಹೌದು. ನಾನು ಈ ಊರವಳಲ್ಲ. ಆದರೆ ಸದ್ಯ ಈ ಊರವಳೆ.

ಎಂದರೆ?—ಎಂದು ಅಂಬುಜಾಕ್ಷಿಯು ಮುಖ ನೋಡುತ್ತ ನಿಂತಳು.

ಈಗಿಲ್ಲಿ ಮೆಜಿಸ್ಟ್ರೇಟಾಗಿದ್ದಾರಲ್ಲ—

ಹೌದು

ಅವರ ಹೆಂಡತಿ.

ಓ! ತಿಳಿಯಿತು—ಎಂದು ಸಮಾಧಾನದಿಂದ ಹೇಳಿದಳು. ಅವಳ ಆಗಿನ ಸ್ವರದಲ್ಲಿ ಯಾವ ಬಿರುಕನ್ನು ಕಾಣುವೆನೆಂದು ವಸುಮತಿ ಊಹಿಸಿದ್ದ ಳೋ ಅದಾವುದನ್ನೂ ಕಾಣಲಿಲ್ಲ. ಅಂಬುಜಾಕ್ಷಿಯು ಸುಸ್ಥಿತಳಾಗಿ ಸುಮ್ಮ ನಿದ್ದು ಸ್ವಲ್ಪ ಹೊತ್ತಿನ ಮೇಲೆ ಗೃಹಿಣಿಯಂತೆ ವಸುಮತಿಯ ಕಾಲಿಗೆ ಬಾಗಿ ನಮಸ್ಕರಿಸಿದಳು.

ವಸುಮತಿಯು ಆಶ್ಚರ್ಯಗೊಂಡಳು. ಈ ಪರಿಸ್ಥಿತಿಯನ್ನು ಅವಳು ಎಂದೂ ಎಣಿಸಿದ್ದಿಲ್ಲ. ತುಸು ಹೊತ್ತು ಅವಾಕ್ಕಾಗಿದ್ದು ಕೊನೆಗೆ ಕೇಳಿ ದಳು—ಅದೇನು ನೀವು ನನಗೆ ನಮಸ್ಕಾರ ಮಾಡಿದಿರಿ?

ಏನಿಲ್ಲ. ನೀವು ಅವರ ಹೆಂಡತಿಯಲ್ಲವೆ?

ನಿಮಗೆ ಅವರ ಪರಿಚಯವಿದೆಯೆ?

ಅಂಬುಜಾಕ್ಷಿಯು ನಸುಗುತ್ತ—ಬನ್ನಿ ಮೇಲೆ ಹೋಗೋಣ. ನೀವು ನಿಂತೇಯಿದ್ದೀರಲ್ಲ? ಅಲ್ಲೇ ಮಾತಾಡೋಣ—ಎಂದು ಅವಳನ್ನೂ ಮಾಳಿಗೆಗೆ

ಕರೆದೊಯ್ದಳು. ಅಲ್ಲಿ ಕುಳಿತುಕೊಂಡ ಮೇಲೆ—ನೀವು ಏನನ್ನೋ ವಿಶೇಷವಾಗಿ ತಿಳಿಯಬೇಕೆಂದು ನಮ್ಮಲ್ಲಿಗೆ ಬಂದಂತಿದೆ—ಎಂದಳು.

ವಸುಮತಿಯು ಮಾತಾಡದೆ ಮುಂದಿನ ಪಟವೊಂದನ್ನು ಕುತೂಹಲದಿಂದ ಎವೆ ಮುಚ್ಚದೆ ನೋಡುತಿದ್ದು—ಇದು ನಿಮ್ಮ—

ನಮ್ಮ ಮೂರ್ತಿ—ಕೃಷ್ಣಮೂರ್ತಿ.

ಸರಿ. ತಿಳಿಯಿತು. ಅದಕ್ಕಾಗಿಯೇ ನಾನು ಇಲ್ಲಿಗೆ ಬಂದುದು—ಎಂದು ಪಟವನ್ನು ನೋಡುತಿದ್ದಳು.

ಏಕೆ? ನಮ್ಮ ಮೂರ್ತಿಯನ್ನು ಹಾಗೆ ನೋಡುತಿದ್ದೀರಿ?

ನಿಮ್ಮ ಮೂರ್ತಿಯನ್ನು ಮಾತ್ರವಲ್ಲ—ನಮ್ಮ ದೇವನನ್ನೂ ನೋಡುತಿದ್ದೇನೆ.

ಎಲ್ಲಿ?

ಈ ಪಟದಲ್ಲಿ! ಇಬ್ಬರೊಳಗೆ ಹೀಗೂ ಸಾದೃಶ್ಯವಿದೆಯೆಂಬುದನ್ನು ನಾನು ಈ ತನಕವೂ ನಂಬಲಿಲ್ಲ.

ಅಂಬುಜಾಕ್ಷಿಯು ಮಾತಾಡಲಿಲ್ಲ. ವಸುಮತಿಯು ಮುಂದರಿಸಿದಳು. ಈ ಹೋಲಿಕೆಯೇ ನಮ್ಮ ಯಜಮಾನರನ್ನು ದೊಡ್ಡ ಗಂಡಾಂತರಕ್ಕೆ ಗುರಿಮಾಡಿ ಬಿಟ್ಟಿತು.

ಅಂಬುಜಾಕ್ಷಿಯು ಉದ್ವೇಗದಿಂದ—ಏನದು? ಎಂದಳು.

ಆ ದಿನ ನಿಮ್ಮ ಹುಡುಗನಿಗೆ ಮೋಟರಿನ ಅಪಘಡವಾದಾಗ ನಮ್ಮ ಯಜಮಾನರು ಆ ಕಡೆಯಿಂದ ಹಾದು ಬರುತಿದ್ದರು. ಅದನ್ನು ಕಣ್ಣಾರೆ ಕಂಡ ಅವರಿಗೆ ನಮ್ಮ ದೇವನ ಜ್ಞಾಪಕದಿಂದಾಗಿ ಮೆದುಳೇ ತಿಂಗಳತನಕ ಹಾಳಾಗಿದ್ದಿತು. ಮತ್ತೆ ನಿಮ್ಮ ಮೂರ್ತಿಗೆ ಹೆಚ್ಚೇನೂ ಅಪಾಯವಾಗಿಲ್ಲವೆಂದು ತಿಳಿದ ಮೇಲೇನೇ ಅವರ ಸ್ಥಿತಿ ಸುಧಾರಿಸಿದುದು. ಹೀಗೆ ಆ ಹೋಲಿಕೆಯಿಂದಾಗಿ ನಮಗೆಲ್ಲ ಏಳು ಹನ್ನೊಂದು ಆಗಿಹೋಯಿತು!

ಅಂಬುಜಾಕ್ಷಿಯು ಕ್ಷಣಕಾಲ ಸುಮ್ಮನಿದ್ದು ಆತ್ಮಸಮಾಧಾನದಿಂದ ಯೋಚಿಸುತಿದ್ದಳು. ಇಂತಹ ದೇವತಾ ಮನುಷ್ಯನನ್ನು ನಾನು ಹಲ

ವೊನ್ಮ್ಮೆ ವಿಕಾರವಶಳಾಗಿ ಅನ್ಯಥಾ ಭಾವಿಸಿದ್ದೆನಲ್ಲ!—ರಕ್ತಸಂಬಂಧವು ತನ್ನ ಸಂತಾನವನ್ನು ಮರೆಯುವುದಿಲ್ಲ. ನಿತ್ಯ ಜೀವನದಲ್ಲಿ ಅದು ಅಂತಹ ಸಂಬಂಧವನ್ನು ಕಡೆಗಣಿಸಿದ್ದರೆ ಆರೀತಿಯ ಸಂದರ್ಭ ಬಂದಾಗ ಭಾವನೆಯ ಬಿಸುಪು ಎದೆಯನ್ನು ಸುಟ್ಟೀ ಸುಡುವುದು. ನನ್ನ ಅಪರಾಧವನ್ನು ದೇವರೇ ಕ್ಷಮಿಸಬೇಕು!

ವಸುಮತಿಯು ಮತ್ತೂ ಹೇಳತೊಡಗಿದಳು---ಇದು ಯಾವ ರೀತಿಯ ಹೋಲಿಕೆಯೆಂಬುದು ದೇವರಿಗೇ ಗೊತ್ತು. ಇದೂ ಸಾಧ್ಯವೆ?—ಎಂದು ನಾನೀಗ ಆಶ್ಚರ್ಯಪಡಬೇಕಾಗಿದೆ. ನಮ್ಮ ಪೇದೆ ಇದನ್ನು ಮೊತ್ತಮೊದಲಿಗೆ ಹೇಳಿದಾಗ ನಾನು ಅವರೊಡನೆ ಪ್ರಸ್ತಾವವೆತ್ತಿದೆ. ಅದಕ್ಕೆ ಅವರು ಮಾತು ಹಾರಿಸಿ ಬಿಟ್ಟರು. ಕೊನೆಗೆ ಆ ದಿನ ಅವರಿಗೆ ಒಮ್ಮಿಂದೊಮ್ಮೆಗೆ ಮೆದುಳಿಗೆ 'ಶೋಕ್' ಆದಾಗ ಡಾಕ್ಟರರಿಗೆ ಅದರ ನೆಲೆಯರಿಯಲು ಬಹಳ ಕಷ್ಟವಾಗಿ ಹೋಯಿತು. ಮತ್ತೆ ನಾನೇ ಯೋಚಿಸಿ ಯೋಚಿಸಿ ಆಸ್ಪತ್ರೆಗೆ ಜನಕಳು ಹಿಸಿ ತಿಳಿದುಕೊಂಡು ಅದನ್ನು ಡಾಕ್ಟರರಿಗೆ ತಿಳಿಸಿದ ಮೇಲೆನೇ ಅವರಿಗೆ ಮುಂದಿನ ಮಾರ್ಗ ತಿಳಿಯಲಿಕ್ಕೆ ಅನುಕೂಲವಾಯಿತು. ಅಂತೂ ಅಂದಿನಿಂದಲೇ ನಾನು ಯೋಚಿಸತೊಡಗಿದ್ದೆ-ನಮ್ಮವರ ಗ್ರಹಕ್ಕೂ ನಿಮ್ಮ ಹುಡುಗನಿಗೂ ಏನೋ ಒಂದು ಅವ್ಯಕ್ತ ಸಂಬಂಧವಿದೆಯೆಂದು. ಅದಕ್ಕಾಗಿಯೇ ಈದಿನ ನೋಡಿ ಹೋಗಬೇಕೆಂದು ಕುತೂಹಲದಿಂದ ಹೊರಟು ಬಂದೆ.

ಅಂಬುಜಾಕ್ಷಿಯು ಮುಗುಳ್ನಗೆ ನಗುತ್ತ—ಹಾಗಾದರೆ ನಿಮಗೆ ಅದರ ಕುರಿತು ಇನ್ನೂ ಹೆಚ್ಚು ತಿಳಿಯಬೇಕೆಂದು ಅಭಿಲಾಷೆಯೆ? ಎಂದು ಕೇಳಿದಳು.

ಅಭಿಲಾಷೆಯಲ್ಲ—ಅಗತ್ಯವಿದೆ! ಅಲ್ಲವಾದರೆ ಅವರನ್ನು ಸುಧಾರಿಸಿಕೊಂಡು ಹೋಗುವುದೇ ಆಗಿಂದಾಗ ಕಷ್ಟಕ್ಕೆ ಬಂದು ಬಿಡುತ್ತೆ. ಕಾಹಿಲೆಗೆ ಮದ್ದು ಕೊಡುವಾತ ವೈದ್ಯ. ಆದರೆ ಅದರ ಕಾರಣ ತಿಳಿದುಕೊಳ್ಳುವಾತ ಮಹಾವೈದ್ಯ!

ತುಸು ಹೊತ್ತು ಇಬ್ಬರೂ ಸುಮ್ಮನೆ ಕುಳಿತಿದ್ದರು. ನಂತರ ಅಂಬುಜಾಕ್ಷಿಯು ಗಂಭೀರವಾಗಿ---ಸಹಜ. ಅದಕ್ಕೆ ನೀವೇ ಬಂದುದಕ್ಕಾಗಿ ನನಗೆ

ತುಂಬಾ ಸಂತೋಷವಿದೆ. ಆದರೆ ಅದನ್ನೆಲ್ಲಾ ತಿಳಿದು ನೀವು ಬೇಸರ ಪಡ ದಿದ್ದರೆ ಎಲ್ಲವನ್ನೂ ವಿವೇಚನೆಯಿಂದ ಮನಸ್ಸಿಗೆ ತೆಗೆದುಕೊಳ್ಳುವುದಾದರೆ ನಾನು ಎಲ್ಲವನ್ನೂ ವಿಶದವಾಗಿ ತಿಳಿಸುತ್ತೇನೆ. ಆದರೆ ಮೊದಲಿಗೆ ಒಂದು ಲೋಟಾ ಹಾಲು ತಂದು ಕೊಡಲೆ?

ಬೇಡ ಬೇಡ. ನಾನು ಟಿಫಿನ್ ತೀರಿಸಿ ಬಂದೆನಷ್ಟೆ—ಎಂದು ನಿರಾ ಕರಿಸಿದಳು ವಸುಮತಿ.

ಹಾಗಲ್ಲ, ನೀವು ತೀರಿಸಿ ಬಂದಿರಬಹುದು. ಆದರೆ ನಾನು ನಿಮ್ಮ ಸಂಸಾರವನ್ನು ಹಾಳುಮಾಡತಕ್ಕವಳಲ್ಲ. ಹಾಲು ಕೊಡತಕ್ಕವಳು. ಆದ ಕ್ಕಾಗಿಯೆ ಮೊದಲಿಗೆ ನೀವು ಕುಡಿಯಬೇಕು—ಎಂದವಳೇ ಉತ್ತರ ನಿರೀಕ್ಷಿಸದೆ ಕೆಳಗಿಳಿದು ತಾನೇ ಬಿಸಿ ಹಾಲನ್ನು ಬೆಳ್ಳಿಯ ಲೋಟೆಯಲ್ಲಿ ಒಂದಿಗೆ ನಾಲ್ಕು ಬಾಳೆಯ ಹಣ್ಣುಗಳನ್ನು ಥಾಟಿನಲ್ಲಿ ಹಾಕಿ ತಂದು ಮುಂದಿ ಟ್ಟಳು.

ನೀವು ತೆಗೆದುಕೊಳ್ಳಿರಿ. ನನ್ನ ಕತೆಯನ್ನು ನಾನು ಹೇಳುತ್ತಾ ಹೋಗುತ್ತೇನೆ—ಎಂದು ತಾನು ಒಂದು ಹಣ್ಣನ್ನು ಸುಲಿದು ತಿನ್ನುತ್ತ ಹೇಳಿದಳು.

ಆದರೆ ನಾನು ಹೇಳುವ ವಿಚಾರಗಳಲ್ಲಿ ನಿಮಗೆ ಸಹಾನುಭೂತಿಬೇಕು. ಎಂದರೇನೇ ಅವುಗಳ ನಿಜ ಸ್ವರೂಪದ ಗೌರವವನ್ನು ತಿಳಿಯಲು ನೀವು ಸಮರ್ಥರಾಗಬಹುದು. ಅದರಲ್ಲೂ ಹೆಂಗಸಿನ ಮನಸ್ಸನ್ನು ಹೆಂಗಸು ಅರಿಯಬೇಕಾದರೆ ತುಂಬಾ ಸಹನೆಬೇಕು. ಹೆಂಗಸಿನ ಪಾಲಿಗೆ ಸಹನೆಯ್ರೇ ಸ್ವರ್ಗ! ಪ್ರಪಂಚದಲ್ಲಿ ಯಾರು ತಪ್ಪುಮಾಡುವುದಿಲ್ಲ? ಆದರೆ ಅವನ್ನು ತಿದ್ದಿ ಕೊಳ್ಳುವ ಹುಮ್ಮಸವಿಲ್ಲವಾದರೆ ಮಾತ್ರ ಮನಸ್ಸಿನ ಅಶಾಂತಿಯಿಂದಾಗಿ ಸಂಸಾರವು ಕದಡಿ ಹೋಗುವುದು. ಹಡಗಿಗೆ ಲಂಗರು ಹಾಕುವುದಿದೆಯಲ್ಲ—ಹಾಗೇನೇ ಮನುಷ್ಯನ ಮನೋವೇಗಕ್ಕೂ ಸಹನೆಬೇಕು.

ವಸುಮತಿ ಇವುಗಳನ್ನೆಲ್ಲ ಕಿವಿಗೊಟ್ಟು ಕೇಳುತಿದ್ದು ಹಾಲು ಕುಡಿದು ಲೋಟೆ ಕೆಳಗಿಟ್ಟಳು. ಮತ್ತೆ ನೀವು ಕತೆಗೆ ದೊಡ್ಡ ಪೀಠಿಕೆ ಹಾಕಿದಿರಲ್ಲ? ಎಂದಳು.

ಹೌದು. ಕತೆಯೂ ಅದಕ್ಕೂ ದೊಡ್ಡದಿದೆ. ಮೊತ್ತಮೊದಲಿಗೆ ನನ್ನ ತಾಯಿಯೊಬ್ಬಳು ನಾಯಕಸಾನಿ ಎಂದರೆ ನಿಮಗೆ ಬೇಸರ ಬರಲಾರದಷ್ಟೆ?

ವಸುಮತಿ ಆಶ್ಚರ್ಯದಿಂದ ಅವಳ ಮುಖವನ್ನೆ ದಿಟ್ಟಿಸಿದಳು. ಮತ್ತೆ ತನ್ನ ಭಾವಗಳನ್ನು ಬಿಗಿ ಹಿಡಿದುಕೊಂಡು ಸುಮ್ಮನಿದ್ದಳು.

ಅಂಬುಜಾಕ್ಷಿಯು ನಗುತ್ತ—ತಾಯಿ ಸೂಳೆಯಾದರೆ ಮಗಳೂ ಸೂಳೆಯೇ ಆಗಬೇಕಲ್ಲ? ಮತ್ತೆ ಆಗಲೊಲ್ಲೆನೆಂದರೂ ಕೇಳುವರಾರು? ಆದರೆ ನಾನು ಅದಕ್ಕೆ ವ್ಯತಿರಿಕ್ತವಾಗಿ ನಡೆಯಬೇಕೆಂದು ಸಾಹಸಪಟ್ಟೆ. ನನಗೆ ಸಾಕಷ್ಟು ವಿದ್ಯೆಯಿದ್ದಿತ್ತು. ತಿಳುವಳಿಕೆಯಿದ್ದಿತ್ತು. ಅಲ್ಲದೆ ಚಿಕ್ಕಂದಿನಲ್ಲಿ ತಾಯಕೂಡೆ ವಿಟ ಪುರುಷರ ಸಿಕಲಾಟಗಳನ್ನು ಕಂಡು ಕಂಡು ಬೇಸತ್ತು ಹೋಗಿದ್ದೆ. ಎಂಜಲು ತಿನ್ನುವ ನಾಯಿಯಂತಹ ಆ ವೃತ್ತಿಯ ಮೇಲೆ ನನಗೆ ದೀರ್ಘ ದ್ವೇಷವಿದ್ದಿತು. ಸ್ತ್ರೀಯ ಯೌವನದ ಹೃದಯವು ಪವಿತ್ರವಾದುದು. ಅದರಲ್ಲಿ ಒಂದು ದೇವರನ್ನು ನಂಬಿ ಪೂಜಿಸಿ ಮುಕ್ತಿ ಪಡೆಯಬೇಕೆಂಬುದೇ ನನ್ನ ಆದರ್ಶವಾಗಿದ್ದಿತು. ನಿಜವಾಗಿಯೂ ನಾನು ಆದರ್ಶವಾದಿನಿ, ಎಂದಿಗೂ ನಾನು ಆದರ್ಶಕ್ಕೆ ಅಪಚಾರ ಮಾಡಲೆಳಸಲಿಲ್ಲ. ಆದುದರಿಂದಲೇ ನಮ್ಮವರ ಅವಹೇಳನಕ್ಕೆ ಗುರಿಯಾಗಿದ್ದೆ. ತಾಯ ಕೋಪಕ್ಕೆ ಪಾತ್ರಳಾಗಿದ್ದೆ. ಇಂತಹ ಸಂದರ್ಭದಲ್ಲಿ ನಾನು ಆಕಸ್ಮಿಕವಾಗಿ ಒಬ್ಬ ಗಂಡುಸನ್ನು ಒಳಗೆ ಕರೆದುಕೊಳ್ಳಬೇಕಾಯಿತು. ಆಗ ನನಗೆ ಎಷ್ಟು ಸಂತೋಷವಾಗಿಲ್ಲ!

ಅಂಬುಜಾಕ್ಷಿಯು ಒಮ್ಮೆ ನಿಟ್ಟುಸಿರು ಸೆಳೆದು ಪುನಃ ಹೇಳತೊಡಗಿದಳು. ಇಷ್ಟು ದಿನಗಳ ಸಂಸರ್ಗದಲ್ಲಿ ನಿಮ್ಮವರು ನಿಮ್ಮೊಡನೆ ಯಾವುದನ್ನು ಹೇಳಲು ನಾಚಿ ಅಡಗಿಸಿದ್ದರೋ ಅದನ್ನು ನಾನೀಗ ಹೇಳತೊಡಗಿರುವುದು ನಿಜವಾಗಿಯೂ ಅನ್ಯಾಯ. ಆದರೆ ನೀವು ಅದಕ್ಕಾಗಿಯೇ ಇಲ್ಲಿಯ ತನಕ ಬಂದವರು. ಅಲ್ಲದೆ ಅದರ ಅತ್ಯಗತ್ಯಗೊಂಡು ಬಂದವರು. ಅಷ್ಟರಿಂದಲೇ ನಾನು ನನ್ನ ಹೃದಯದಲ್ಲಿ ಬಚ್ಚಿಟ್ಟದ್ದ ಅಮೂಲ್ಯ ವಸ್ತುವನ್ನು ಈಗ ನಿಮಗೆ ಎತ್ತಿ ತೋರಿಸುತಿದ್ದೇನೆ. ನೀವು ಗಾಬರಿಯಾಗಬಾರದು—ಅನ್ಯಥಾ ತಿಳಿಯಬಾರದು!

ವಸುಮತಿಯು ನಿದಾನವಾಗಿ ಕೇಳಿದಳು—ಯಾರು ಬಂದವರು?

ಮತ್ತಾರೂ ಅಲ್ಲ. ನಿಮ್ಮವರೆ!

ಹಾಂ ನಮ್ಮವರು!—ಎಂದು ಕಣ್ಣು ಬಿಟ್ಟಳು ವಸುಮತಿ.

ಹೌದು. ಆದರೆ ಬರಬೇಕೆಂದು ಅವರು ಬಂದವರಲ್ಲ. ನಿಜವಾಗಿಯೂ ಅದು ದೈವಸಂಕಲ್ಪ. ಮಳೆ ಬರುತಿದ್ದ ವೇಳೆ ಅವರು ತಿಳಿಯದೆ ನಮ್ಮ ಮನೆಯ ಮುಂದುಗಡೆ ನಿಂತಿದ್ದರು. ನಾನು ಬಾಗಿಲು ತೆರೆದು ನೋಡಿದೆ. ಒಳ ಬರಹೇಳಿದೆ. ಅದು ಆತನಕ ಕಾದು ತೆರೆದಿದ್ದ ನನ್ನ ಹೃದಯದ ಕೋಣೆಗೆ ದೇವರು ಬಂದಂತಾಯಿತು!

ಮತ್ತೆ ಆವರು ನಿಮ್ಮಲ್ಲಿಗೆ ಯಾವಾಗಲೂ ಬರುತಿದ್ದರೆ?–ವಸುಮತಿಯ ಈ ಪ್ರಶ್ನೆಯಲ್ಲಿ ಒಂದು ಆತ್ಮವಂಚನೆಯ ದಾಟಿಯಿದ್ದಿತ್ತು.

ಇಲ್ಲ—ಬರಲಿಲ್ಲ. ನಾನು ಸೂಳೆಯ ಮಗಳೆಂಬುದನ್ನು ಅವರು ಗೊತ್ತುಹಚ್ಚಿದ್ದಿರಬೇಕು. ನಮ್ಮ ಪ್ರೀತಿಗೆ ಎಷ್ಟರ ಮಹತ್ವವಿದೆ? ನಮ್ಮ ಹಿರಿಯರು ಪ್ರೀತಿಯೊಡನೆ ಪಗಡೆಯಾಡಿದುದರಿಂದ ನಾವು ಆ ಸೌಭಾಗ್ಯವನ್ನು ಕಳೆದುಕೊಂಡಿರುವೆವು. ನಮ್ಮ ಪ್ರೀತಿಗೆ ಬೆಲೆಯಿಲ್ಲ. ನಮ್ಮ ಮೇಲೆ ಕುಲದ ಶಾಪವಿದೆ. ಅದಕ್ಕೆ ವಿಮೋಚನೆಯಿಲ್ಲ. ನಾವು ಎಂದೆಂದಿಗೂ ಕಲ್ಲಾಗಿರಬೇಕು! ನಾವು ಕೈಯಲ್ಲಿ ಹೃದಯವನ್ನು ಹಿಡಿದು ತೋರಿಸಿದರೂ ಅದನ್ನು ಯಾರೂ ನಂಬುವಂತಿಲ್ಲ. ಕೆಲವು ದರೋಡೆಗಾರರು ಆಗಿಂದಾಗ ಹೊಂಚಿದರೆ ಸೈ ತೀರಿತು. ಇಂತಹ ಪಂಜರದಿಂದ ಹಾರಿ ಹೋಗಬೇಕೆಂದು ನಾನು ಎಷ್ಟು ತಡವೆ ಯೋಚಿಸಿದ್ದಿಲ್ಲ! ಮನಸ್ಸು ಕೂಡಿದ ಕಡೆ ಒಂದು ನಿಜವಾದ ಸಂಸಾರ ಹೂಡಿ ಹೆಚ್ಚಳಪಡಬೇಕೆಂದು ಎಷ್ಟು ಆಶಿಸಿಲ್ಲ! ಆದರೆ ಅದು ಯಾವುದೂ ಸಾಧಿಸಿಲ್ಲ. ಕಟ್ಟಕಡೆಗೆ ನಿಮ್ಮವರು ಎರಡು ದಿನ ಬಂದು ನನ್ನ ಜೀವನವನ್ನು ಸ್ವರ್ಗವನ್ನಾಗಿ ಮಾಡಿ ಹೊರಟು ಹೋದರು!

ವಸುಮತಿ ವಿಕಾರಶೂನ್ಯಳಾಗಿ ಕೇಳುತ್ತ ಸುಮ್ಮನಿದ್ದಳು. ಅಂಬುಜಾಕ್ಷಿಯು ಕ್ಷಣಹೊತ್ತು ಮೌನವಾಗಿ ಹಿಂದಿನ ಸುಖವನ್ನು ಅನುಭವಿಸುವಂತಿದ್ದು ಮತ್ತೆ ಮುಂದರಿಸಿದಳು.

ಆದರೆ ಬೆಳಕು ಕಂಡವನು ಕತ್ತಲಿಗೆ ಹೆಚ್ಚೆಚ್ಚು ಹೆದರಲಿರುವನು. ಹಾಗೆಯೇ ಒಮ್ಮೆ ಶೀಲ—ಸೌಂದರ್ಯವೇನೆಂಬುದನ್ನು ತಿಳಿದ ನಾನ್ನು ಮತ್ತೆ ಅದರ ದುರುಪಯೋಗಕ್ಕೆ ಅಂಜಿ ಹೋದೆ! ಆದರೆ ಮಾಡುವು ದೇನು? ಒಮ್ಮೆ ಒಡೆದುಹೋದ ಮಡಕೆಯನ್ನು ಮತ್ತೆ ಕೂಡಿಸಲು ಬರು ವಂತಿದೆಯೆ? ನನ್ನ ಅಂತಹ ಧ್ಯೇಯದ ಸ್ವಪ್ನವು ಅಂದಿಗಂದಿಗೆ ಕಳೆದೇ ಹೋಯಿತು. ಮತ್ತೆ ನನ್ನ ಪಾಲಿಗೆ ಉಳಿದುದೆಂದರೆ ನನ್ನ ಮೂರ್ತಿ ಮಾತ್ರ!

ವಸುಮತಿಯು ಏನೋ ಹೇಳಬೇಕೆಂದಿದ್ದು ಮಾತು ತಡೆದಳು. ಅದರ ಅಭಿಪ್ರಾಯವನ್ನು ಗ್ರಹಿಸಿ ಅಂಬುಜಾಕ್ಷಿಯು ಹೇಳಿದಳು—ಹೌದು ಅದನ್ನೆ ಉಳಿಸಿಕೊಂಡು ನಿಶ್ಚಿಂತಳಾಗಿ ಇರಬಹುದಿದ್ದಿತು. ಆದರೆ ಅರಮನೆ ಯಲ್ಲಿ ಕುಳಿತು ಬಡತನವನ್ನು ವಿಮರ್ಶೆ ಮಾಡುವುದು ಬಹು ಸುಲಭ. ಮಾತ್ರ ಬಡತನದ ಕುಪ್ಪೆಯ ಮೇಲೆ ಕುಳಿತಲ್ಲ! ಅಷ್ಟರಲ್ಲಿ ನಮ್ಮ ತಾಯಿಯೂ ತೀರಿಕೊಂಡಳು. ಅವಳಿದ್ದಿದ್ದರೆ ಏನಾದರೂ ಉದ್ಯೋಗಕ್ಕೆ ಕೈಹಾಕಿ ಹೊಟ್ಟೆ ಹೊರೆದುಕೊಳ್ಳುತಿದ್ದೆ. ಮತ್ತೆ ಮನೆಯ ಭಾರ ನನ್ನ ತಲೆಯ ಮೇಲೇನೇ ಬಿದ್ದಿತು. ಆಗ ಏನನ್ನಾದರೂ ಮಾರಿ ಹೊಟ್ಟೆ ತುಂಬಿಸಿಕೊಳ್ಳಲೇಬೇಕಾಗುವುದಲ್ಲ? ನಮ್ಮ ಕೂಡೆ ಮತ್ತೇನಿದೆ? ಸೂಳೆ— ಎಂಬ ಹಿರಿಯರು ತಲೆಪಟ್ಟೆ ಬರೆದ ನಮ್ಮ ದೇಹ ಮಾತ್ರ!

ನಿಮಗೆ ಬೇಸರವಾಗಬಹುದು. ಅಥವಾ ಕೋಪವೂ ಬರಬಹುದು. ಆದುದರಿಂದಲೇ ನಾನು ಮೊದಲೇ ಹೇಳಿರುವೆನು. ವಿಕಾರಕ್ಕೆ ಮನಸ್ಸು ಕೊಡಬಾರದೆಂದು. ಆದರೆ ನಾನು ಉದ್ರೇಕಕ್ಕೆ ಎಂದೂ ಮನಸ್ಸು ತೆರ ಲಿಲ್ಲ. ಗಂಡಸು ಹೆಂಗುಸಿನ ಸಂಪರ್ಕದ ಮೇಲೆಯೂ ಸಂಭಾವಿತನಾ ಗಿಯೇ ಬಾಳುತ್ತಾನೆ. ಹೆಂಗುಸು ಮಾತ್ರ ಸೂಳೆಯಾಗುತ್ತಾಳೆ! ಈ ವಿಚಾರವು ಸತ್ಯ. ಹಾಗಿದ್ದರೂ ನಾನು ಒಂದು ಕ್ಷಣವಾದರೂ ಅವರ ಕುರಿತು ದೋಷಾರೋಪಣೆಯನ್ನು ಮಾಡಲಿಲ್ಲ. ಅದು ಹೂವಿನೆಡೆಗೆ ಹಕ್ಕಿ ಬಂದಂತೆ. ಹೂವು ಬಾಡಿ ಬಿದ್ದರೂ ಹಕ್ಕಿಯು ಹಾರಿ ಹೋಗಿ ಹಾಡಬಲ್ಲುದು. ಬಾಡಿಬಿದ್ದ ಹೂವು ಆ ಎಲ್ಲಾ ಲೆಕ್ಕಾಚಾರಗಳನ್ನು

ತೆಗೆದುಕೊಂಡು ಏನು ಮಾಡಲಿದೆ? ಅದನ್ನೆಲ್ಲ ಪೂರ್ವಪುಣ್ಯ—ದೈವ ಯೋಗ್ಯತೆ ಎಂದು ಕರೆಯಬೇಕೆಂದು ಕೆಲವು ಪಂಡಿತರು ಕೆಲವು ಕಷ್ಟದ ಶಬ್ದಗಳನ್ನು ಕೊಟ್ಟಿದ್ದಾರೆ. ಅದನ್ನು ತಲೆಗೆ ಸುತ್ತಿಕೊಂಡು ಅಳಬೇಕು—ಅಥವಾ ನಗಬೇಕು. ಜೀವ ತೀರಿತು. ಅದೇ ಪ್ರಪಂಚ!

ಒಂದು ಕ್ಷಣಕಾಲ ಯಾರೂ ಮಾತಾಡಲಿಲ್ಲ. ಇಬ್ಬರೂ ಭಾರವಾಗಿ ಉಸಿರು ಬಿಡುತಿದ್ದರು. ಮತ್ತೆ ಅಂಬುಜಾಕ್ಷಿಯೇ ಮೂರ್ತಿಯ ಪಟವನ್ನು ಕೈಯಲ್ಲಿ ಹಿಡಿದು ನೋಡುತ್ತ ಹೇಳಿದಳು—ನನ್ನ ಮೂರ್ತಿ—! ನಾವು ಹಿಂದುಗಳು ಮೂರ್ತಿ ಪೂಜಕರು. ದೇವರನ್ನು ಬಿಂಬದಲ್ಲಿ ಆವಾಹಿಸಿ ಪೂಜಿಸುವವರು. ಒಂದು ದೊಡ್ಡ ದೇವಸ್ಥಾನವು ಬಿದ್ದು ಮಣ್ಣುಪಾಲಾಗಿ ಅಲ್ಲಿ ಒಂದು ಶಿಲಾಪ್ರತಿಮೆಯು ಮಾತ್ರ ಉಳಿದು ಎದ್ದು ನಿಂತಿರುವಂತೆ, ನನ್ನ ಹೃದಯದ ಆದರ್ಶವೆಲ್ಲಾ ನುಚ್ಚುನೂರಾಗಿ ಈ ಒಂದು ಪ್ರತಿಮೆ ಮಾತ್ರ ಅದರ ನೆನಪಿಗಾಗಿ ಉಳಿದಿದೆ. ಒಮ್ಮೊಮ್ಮೆ ಇದನ್ನು ನೋಡುವಾಗ ಗರ್ವಬರುವುದು. ಆದರೂ ಅದನ್ನು ಪವಿತ್ರವೆಂದು ಭಾವಿಸಿ ಮುಟ್ಟಲೂ ಹೆದರಿ ರಕ್ಷಿಸುತಿದ್ದೇನೆ. ಏಕೆಂದರೆ ಅದು ನನ್ನ ನೈತಿಕ ಹೋಮದ ಹವಿರ್ಭಾಗದ ಪುಣ್ಯಶೇಷ!

ಆ ದಿವಸ ನನ್ನ ಮಗನ ಅಪಘಾತವನ್ನು ಕೇಳಿ ಹುಚ್ಚು ಹುಚ್ಚಾಗಿದ್ದೆ. ನಾನು ಇನ್ನೂ ಏಕೆ ಬದುಕಿರಬೇಕೆಂದು ತರ್ಕಿಸುತಿದ್ದೆ. ನನಗೆ ಆ ಮೇಲಿನ ಎರಡು ಮಕ್ಕಳಿವೆ. ಆದರೆ ಅವುಗಳು ನನ್ನ ಮನಸ್ಸಿನ ಮಕ್ಕಳಲ್ಲ—ದೇಹದ ಮಕ್ಕಳು. ಅವುಗಳನ್ನೆಲ್ಲ ನೀರಿಗೊಗೆದು ಬಾವಿಗೆ ಹಾರಿ ಬಿಡಬೇಕೆಂದು ಹವಣಿಸಿದೆ.

ಅಂಬುಜಾಕ್ಷಿಯ ಕಣ್ಣಲ್ಲಿ ನೀರೂರಿತು. ಅದನ್ನು ಒರಸುತ್ತ ಸ್ವಲ್ಪ ಹೊತ್ತು ಕಣ್ಮುಚ್ಚಿ ಕೈ ಮುಗಿದು ಹೇಳಿದಳು—ಅಂತೂ ದೇವರು ದೊಡ್ಡವನಮ್ಮ!

ಅಷ್ಟರಲ್ಲಿ ಆ ಎರಡು ಚಿಕ್ಕ ಮಕ್ಕಳು ಶಾಲೆಯಿಂದ ಬಂದು ಮಾಳಿಗೆಗೆ ಓಡಿ ಬಂದುವು. ಅವುಗಳನ್ನು ಕೈಕಾಲು ತೊಳೆಯಲು ಕೆಲಸದವಳ

ವಶಕೊಟ್ಟು ಅಂಬುಜಾಕ್ಷಿ ಪುನಃ ವಸುಮತಿಯ ಪಕ್ಕದಲ್ಲಿ ಬಂದು ಕುಳಿತಳು.

ವಸುಮತಿಯೂ ಮಾತಾಡುತಿದ್ದಿಲ್ಲ. ಅವಳ ಹೃದಯದಲ್ಲಿ ಭಾವ ಸಾಂಕರ್ಯವಿದ್ದಿತು. ಸ್ತ್ರೀಸಹಜವಾದ ಅಸೂಯೆಯನ್ನು ವಿವೇಕವು—ಸಂದರ್ಭವು—ಸಮಾಲೋಚನೆಯು ತಲೆ ಮೆಟ್ಟಿ ಕನಿಕರಗೂಡುತಿದ್ದಿತು. ಕೂಡಿದ ಒಂದು ಮೋಡವನ್ನು ತಂಗಾಳಿಯು ತೂರಿ ತೂರಿ ತೆರವು ಮಾಡುವಂತೆ ಆತ್ಮದ ಸಹನೆ ಸಹಾನುಭೂತಿಯು ಅವಳ ಹಣೆಯ ಮೇಲೆ ಸುಕ್ಕು ಗಟ್ಟಿದ ಸಂಶಯದ ಮಬ್ಬನ್ನು ದೂರೀಕರಿಸಿ ಹೊಯ್ದಾಡುತಿದ್ದಿತು. ಅವಳು ಏನನ್ನು ಕಾಣಬೇಕೋ ಅದನ್ನು ಕಂಡಳು. ಏನನ್ನು ತಿಳಿಯಬೇಕೋ ಅವನ್ನು ತಿಳಿದಳು. ಒಂದು ರಂಗದ ಕತ್ತಲ ಭಾಗದಲ್ಲಿ ನಡೆದ ಒಂದು ಕ್ಷಣಿಕ ಘಟನೆಯ ಗೂಢಾರವನ್ನು ಹಣಕಿ ನೋಡಿದಳು. ಅದರಿಂದ ಅವಳಿಗೆ ಹಿತವಾಯಿತೋ—ಅಹಿತವಾಯಿತೋ ದೇವರೇ ಬಲ್ಲ! ಹೇಗೇಯಿರಲಿ. ಆಗ ಅವಳು ತನ್ನ ಮುಂದೆ ಒಬ್ಬಳು ಸೂಳೆಯನ್ನು-ಹಣಕ್ಕಾಗಿ ಮಾನವನ್ನು ಕಳೆದುಕೊಂಡ ದೇಹದ ಮೌಲ್ಯದ ಒಬ್ಬಳು ಹೆಂಗುಸನ್ನು ಕಾಣಲಿಲ್ಲ. ಒಂದು ಕನ್ನಡಿಯ ಚೂರನ್ನು—ಪೂರ್ಣವಿದ್ದ ವೇಳೆ ಬ್ರಹ್ಮಾಂಡದ ಸುಖ ಸೌಂದರ್ಯಗಳನ್ನು ಒಪ್ಪಿಡಿದು ತೋರಿಸಲೆಳಸಿದ ಇಂದಿಗೂ ಸತ್ಯ ಸೌಂದರ್ಯದ ಒಂದು ಭಾಗವನ್ನು ಆತ್ಮನಾ ತೋರುತಿದ್ದ ಒಂದು ಕನ್ನಡಿಯ ಚೂರನ್ನು ಕಂಡಳು!) ಅದನ್ನು ಒಡೆದ ಗಾಜು ಎಂದು ದೂರ ಬಿಸುಡಲೂಬಹುದು. ಅಥವಾ ಆದರ್ಶದ ಅವಶೇಷವೆಂದು ಎತ್ತಿಡಲೂಬಹುದು. ಅದು ತಿಳಿದು ನೋಡುವವರ ಜೀವ ಯೋಗ್ಯತೆ!

ಯೋಗ್ಯತೆಯ ಮಾತು ಹೇಗೇಯಿರಲಿ. ಅವನ್ನು ವಸುಮತಿಯು ಸಾಂತ್ವನೆಯಿಂದ ತೂಗಿ ನೋಡಿದಳು. ಅಂಬುಜಾಕ್ಷಿಯ ನಿರಾಲವಾದ ರೂಪದ ಮುಂದೆ ಅವಳ ಚರಿತ್ರೆಯ ಹಿನ್ನೆಲೆಯು ಉಜ್ವಲವಾಗಿ ಕಂಡಿತು. ಆಧುನಿಕ ಪತಿವ್ರತೆಯರ ಕರ್ಮಕಾಂಡದ ಮುಂದೆ ಅದನ್ನು ಹೋಲಿಸಿ ನೋಡಿದಳು. ಹೋಲಿಸಿದಷ್ಟೂ ಅದು ಹೆಚ್ಚಾಗಿ ಕಂಡಿತು. ಘನವಾಗಿ ಕಂಡಿತು! ಅವಳಿಗೆ ಹಿಂದೆ ಶಾಲೆಯಲ್ಲಿ ಓದಿದ ಜ್ಞಾಪಕವಿದೆ—ಸತೀ ಅನಸೂಯೆಯು ದೇವರನ್ನು ಮಗುವನ್ನಾಗಿ ಮಾಡಿ ಆಡಿಸಿದ ಪುರಾಣಕತೆ—!ಅದು ಪುರಾಣ

ವಾಯಿತು. ಇದೀಗ ಚರಿತ್ರೆ. ಈಕೆ ತನ್ನ ದೇವರನ್ನು ಮಗುವನ್ನಾಗಿ ಮಾಡಿ ಕಾಪಾಡುತಿದ್ದಾಳೆ! ಆದರೆ ಇವಳು ಮಾತ್ರ ಸತಿಯಲ್ಲ—ಸೂಳೆ!

ವಸುಮತಿಯು ಹೀಗೆಯೇ ತುಂಬಾ ಹೊತ್ತು ಯೋಚಿಸುತ್ತಾ ಕುಳಿತಳು. ಆ ವಾತಾವರಣವೇ ಯೋಚನೆಗೆ ಉದ್ಬೋಧಕವಾಗಿದ್ದಿತು. ಮಾತಿಗಿಂತಲೂ ಅಂತಹ ಮೌನವೇ ಪರಿಣಾಮಕಾರಿಯಾಗಿ ಮನಸ್ಸು ಸುತ್ತುತಿದ್ದಿತು.

ಹತ್ತು ನಿಮಿಷ ಕಳೆದ ಮೇಲೆ ಅಂಬುಜಾಕ್ಷಿಯೇ ಮಾತೆತ್ತಿದಳು—ಏನು? ನೀವು ತುಂಬಾ ಯೋಚನೆಗೆ ಬಿದ್ದಿರಲ್ಲ!

ವಸುಮತಿಗೆ ಏನು ಹೇಳಲೂ ತೋಚಲಿಲ್ಲ. ಅವಳು ಯೋಚಿಸುತಿದ್ದುದೇನೋ ಸಹಜ. ಆದರೆ ಅದು ಅವಳ ದೃಷ್ಟಿಯಿಂದಲ್ಲ, ಅಂಬುಜಾಕ್ಷಿಯ ದೃಷ್ಟಿಯಿಂದ; ಪ್ರಪಂಚದ ವಿಶಾಲದೃಷ್ಟಿಯಿಂದ; ಆದುದರಿಂದಲೇ ಒಮ್ಮೆ ಗಾಬರಿ ಬಿದ್ದು—ಏನಿಲ್ಲ—ಏನಿಲ್ಲ! ಹೊತ್ತಾಯಿತು—ಎಂತ ಯೋಚಿಸತೊಡಗಿದೆನಷ್ಟೆ—ಎಂದು ಸುಳ್ಳೇ ಹೇಳಿದಳು

ಈ ದಿನ ಭಾನುವಾರ ತಾನೆ! ಮತ್ತೇನು?

ಹಾಂ. ಅವರು ಸಿನೇಮಕ್ಕೆ ಹೋಗಿದ್ದಾರೆ. ಬರುವ ಹೊತ್ತಿಗೆ ಮನೆ ಸೇರಬೇಕು.

ಆಯಿತಮ್ಮ. ಮತ್ತೆ ಈ ಹುಚ್ಚಿಯು ಹೇಳಿದುವರಲ್ಲಿ ಏನಾದರೂ ನಿಮ್ಮ ಮನಸ್ಸಿಗೆ ನಾಟಿದ್ದರೆ ನೀವು ನನ್ನನ್ನು ಕ್ಷಮಿಸಬೇಕು. ನೀವು ಸಂಸಾರಿಗರು, ಯಾವುದನ್ನೂ ಸಂಶಯದೃಷ್ಟಿಯಿಂದ ಹೃದಯಕ್ಕೆ ಅಂಟಿಸಿಕೊಳ್ಳಬಾರದೆಂದೇ ಇಷ್ಟು ವಿವರವಾಗಿ ತಿಳಿಸಬೇಕಾಯಿತು.

ವಸುಮತಿಯು ಎದ್ದು ನಿಂತು ಅವಳ ಕೈಹಿಡಿದು ಹೇಳಿದಳು—ಹಾಗೇನಿಲ್ಲ. ನಾನು ತಿಳಿಯಬೇಕೆಂದಿದ್ದುದಕ್ಕಿಂತಲೂ ಹೆಚ್ಚಾಗಿ ನೀವು ನನ್ನೊಡನೆ ಮನಸ್ಸು ಬಿಚ್ಚಿ ಮಾತಾಡಿದ್ದೀರಿ. ಮತ್ತೆ ನಿಮ್ಮ ಮೇಲೆ ನಾನೇಕೆ ಸಂಶಯಪಡಬೇಕು? ಅದರಲ್ಲಿ ಒಬ್ಬಾಕೆ ಹೆಂಗುಸು ಮತ್ತೊಬ್ಬಳನ್ನು ವೊತ್ತಮೊದಲಿಗೆ ನಿರಾಯಾಸವಾಗಿ ತಿಳಿದುಕೊಳ್ಳುವಳು. ಒಬ್ಬಳ

ಮನಸ್ಸಿನಲ್ಲಿ ಅಡಗಿಸಿಡುವ ಸಂದರ್ಭಗಳೇನಾದರೂ ಇದ್ದರೆ ಅವನ್ನು ಇವಳು ಮೊತ್ತಮೊದಲಿಗೇ ಹೇಗಿದ್ದರೂ ಊಹಿಸಿಕೊಳ್ಳುವಳು. ಹೆಂಗುಸಿನ ಹೃದಯವೇ ಒಂದು ಮರೆ. ಅವರಿಂದ ಮತ್ತೊಬ್ಬಳು ಏನನ್ನು ಮರೆಮಾಸ ಬಲ್ಲಳು? ಹೆಂಗುಸಿಗೆ ಹೆಂಗುಸು ಸಮಾನ ಧರ್ಮ!

ಆಗ ಆ ಎರಡು ಆತ್ಮಗಳು ಬಹಳ ಹತ್ತಿರ ಬಂದಂತೆ ಭಾಸವಾಗುತಿದ್ದಿತು. ಈ ತನಕ ಬದುಕು ಕಾಣದಿದ್ದ ಬೆಳಕನ್ನು ಸಹನೆಯು ತೋರಿಸಿಕೊಟ್ಟಿದೆ. ಈ ತನಕ ದೂರ ದೂರವಿದ್ದ ಎರಡು ನಕ್ಷತ್ರಗಳನ್ನು ವಾತಾವರಣವು ಸೇತುಬಿಗಿದು ಕೂಡಿಸಿದೆ. ಆತ್ಮಜಿಜ್ಞಾಸೆಯು ಸೌಮ್ಯತೆಯಿಂದ ಪರಸ್ಪರ ಪರಿಚಯವನ್ನು ಹೆಚ್ಚಿಸಲು ಹವಣಿಸಿದೆ. ಕಾರಣ—ಅದು ಸಂಸ್ಕಾರದ ಪ್ರಭಾವ. ಜೀವನದಲ್ಲಿ ಸಂಸ್ಕಾರವೇ ಮೊದಲು—ವೃತ್ತಿಯು ತದನಂತರ. ವೃತ್ತಿಯ ಅರಿವಿಲ್ಲದೇನೇ ಸಂಸ್ಕಾರವು ಒಂದಕ್ಕೊಂದು ಕೂಡಿಕೊಳ್ಳಲು ಯತ್ನಿಸುವುದು. ಅರಿವಾದಾಗಲೂ ಅದು ನಿಷ್ಕಾರಣವಾಗಿ ಬಿಟ್ಟುಕೊಡುವುದಿಲ್ಲ. ಇದೇ ಬದುಕಿನ ಸಾತ್ವಿಕ ಪ್ರವೃತ್ತಿ!

ವಸುಮತಿಯು ಅಂಬುಜಾಕ್ಷಿಯ ಹೆಗಲ ಮೇಲೆ ಕೈಯಿಟ್ಟು ಹಗುರಾಗಿ ಮಾಳಿಗೆಯಿಂದ ಕೆಳಗಿಳಿದಳು. ಮತ್ತೆ ಕ್ಷಣಕಾಲ ಒಬ್ಬರನೊಬ್ಬರು ನೋಡಿಕೊಂಡು ಮೆಚ್ಚಿ ಅರ್ಥಪೂರ್ಣವಾಗಿ ನಕ್ಕು ಸುಮ್ಮನಿದ್ದರು. ಆ ಮೇಲೆ ಇಬ್ಬರೂ ಹೆಸರು ಕೇಳಿಕೊಂಡರು. ನಂತರ ವಸುಮತಿಯು ಗೆಳೆತನದಿಂದ ಅವಳ ಕೈಹಿಸುಕುತ್ತ ಅಲ್ಲಿಂದ ಹೊರಬಿದ್ದಳು.

ಬರುತ್ತಾ ದಾರಿಯಲ್ಲಿ ಡಾಕ್ಟರ್ ಉಮೇಶರಾಯರ ಚಿಕಿತ್ಸಾಲಯವನ್ನು ಹೊಕ್ಕಲು ಮರೆಯಲಿಲ್ಲ. ಅಲ್ಲಿ ತನ್ನ ಮಡಿಲಲ್ಲಿ ಜತನವಾಗಿಟ್ಟಿದ್ದ ಶ್ರೀಧರಮೂರ್ತಿಯ ಹೊಸ ಸ್ಫೂರ್ತಿಯ ಸಮಾನಾಂತರ ರೇಖೆಗಳನ್ನು ಅವರ ಮುಂದಿಟ್ಟು—ಇನ್ನೊಂದು ಹೊಸ ರೋಗ ತೊಡಗಿದೆ—ಎಂದಳು.

ಏನಿದು? ಎಂದು ಡಾ| ಉಮೇಶರಾಯರು ಅವನ್ನು ತೆಗೆದು ನೋಡುತ್ತ ನಾಲ್ಕು ಸುತ್ತು ತಿರುಗಿಸುತ್ತ ಮತ್ತೆ ಕೆಳಗಿಟ್ಟು ಸುಮ್ಮನಿದ್ದರು. ಉಮೇಶರಾಯರು ಎಷ್ಟೋ ವ್ಯಕ್ತ—ಅವ್ಯಕ್ತ ರೋಗಗಳ ನಿಧಾನವನ್ನು ವಿಚಾರ ಪೂರ್ವಕವಾಗಿ ಕಂಡು ಹಿಡಿದಿದ್ದರು. ಆದರೆ ಈ ರೋಗದ ಸ್ಥಿತಿ

ಯನ್ನು ತಿಳಿಯುವುದು ದುಸ್ಸಾಧ್ಯವಾಗಿ ತನ್ನ ಕನ್ನಡಕವನ್ನು ಕೆಳಗಿಟ್ಟು ಬಿಟ್ಟರು!

ಇಲ್ಲ. ಇದರ ಅರ್ಥವೇ ಆಗಲಿಲ್ಲ. ಏನಾದರೂ ಸಂದರ್ಭವಿದ್ದರೆ ತಿಳಿಸಬೇಕು—

ಕೋರ್ಟಿನಲ್ಲಿ ಆ ಮೋಟರು ಅವಘಡದ ಕೇಸು ಬಂದದೆ ಎಂತ ನಿಂಗಪ್ಪ ಹೇಳಿದ.

ಅದನ್ನು ಕೇಳಿ ಉಮೇಶರಾಯರು ಆ ಕಾಗದವನ್ನು ಹಿಡಿದು ತುಸು ಹೊತ್ತು ಯೋಚಿಸುತಿದ್ದು ಮತ್ತೆ ಒಮ್ಮೆಗೆ ಜ್ಞಾಪಕಗೊಂಡು ಹೇಳಿದರು-- ಸರಿ. ಹಾಗಾದರೆ ಆ ಕೇಸು ಹಿಂದೆಗೆಯುವಂತೆ ಮಾಡುವುದು ಒಳ್ಳೇದು. ಇದು ಅದರ ಪರಿಣಾಮ. ರಾಯರ ತಲೆಯಲ್ಲಿ ಪುನಃ ಅದೇ ಸುಳಿಯ ತೊಡಗಿದೆ. ಈ ಎರಡು ಗೆರೆಗಳು ಇಲ್ಲಿ ಒಂದಕ್ಕೊಂದು ಡಿಕ್ಕಿ ಹೊಡೆದಿವೆ ನೋಡಿ!—ಅಲ್ಲೇ ಅವಘಡ ನಡೆದಂತೆ ಅರ್ಥ. ಹುಶ್ಶ್! ಹೀಗೆ ಮತ್ತೂ ಮತ್ತೂ ಈ ತೊಂದರೆ ಏಕೆ ಮೇಲೆ ಮೇಲೆ ಬರುತ್ತದೋ ನನಗೆ ಅರ್ಥವಾಗುವುದಿಲ್ಲ.

ಆದರೆ ಡಾಕ್ಟರ್!-ನೀವು ಅಂದು ಆ ಹುಡುಗನೇನಾದರೂ ಸಂಬಂಧವೆ ಎಂದು ಕೇಳಿದ್ದಿರಲ್ಲ—

ಹೌದು. ಏನಾಯಿತು?

ಆಗ ನನಗೆ ತಿಳಿದಿದ್ದಿಲ್ಲ.

ಈಗ ಏನು ಸಂಬಂಧ ಬಂತು?

ರಕ್ತ ಸಂಬಂಧ

ಅದು ಹೇಗೆ?

ವಸುಮತಿಯು ಕೊಂಚ ಮಾತು ತಡೆದು ಸುತ್ತಲೂ ನೋಡಿ ಮತ್ತೆ ಸಾವಧಾನವಾಗಿ ಹೇಳಿದಳು—ಇದು ನಿಮಗೆ ಉಪಕಾರಕ್ಕೆ ಬರಬಹುದೆಂದು ಹೇಳುತಿದ್ದೇನಷ್ಟೆಯಲ್ಲದೆ ಬೇರೆಯಲ್ಲ. ಪ್ರಾಯಶ ನಾನು ಒಬ್ಬಳು ಸಂಸಾರಿಣಿಯಾಗಿ ಇದನ್ನು ಹೇಳಬಾರದೋ ಏನೋ—

ಡಾಕ್ಟರರು ಸುಮ್ಮನೆ ಕುಳಿತಿದ್ದರು.

ಒಂದು ಸಮಯ ನಮ್ಮವರಿಗೆ ಅಲ್ಲಿ ಸಂಪರ್ಕವಿದ್ದಿತು—ಎಂದಳು ಮೆಲ್ಲನೆ.

ಸರಿ—ಸಾಕು. ಇನ್ನು ಹೆಚ್ಚಿನ ವಿಚಾರ ನನಗೆ ಅಗತ್ಯವಿಲ್ಲ. ನೀವು ಗೃಹಿಣಿ. ನಿಮ್ಮಲ್ಲಿ ಮತ್ತೇನನ್ನೂ ಕೇಳುವುದರಲ್ಲಿ ನ್ಯಾಯವಿಲ್ಲ. ಆದರೆ ಇದೊಂದು ನಿಶ್ಚಯವಾಯಿತು. ಆ ಹುಡುಗನ ಅವಘಡದ ಸಂಬಂಧವಾಗಿ ಕೇಸು ಕೋರ್ಟಿಗೆ ಬರಲಿದೆಯೆಂದಿರಲ್ಲ ಅದನ್ನು ಹೇಗಾದರೂಮಾಡಿ ನಿಲ್ಲಿಸಿ ಬಿಡಿರಿ. ಅದು ಸಾಧ್ಯವಾಗದೆ ಹೋದರೆ ಅವರು ಇಲ್ಲಿಂದ ವರ್ಗಾಯಿಸಿ ಕೊಳ್ಳಬೇಕು. ಅಥವಾ ರಜೆ ಬರೆದು ಹಾಕಬೇಕು. ಅದರ ಹೊರತು ಬೇರೆ ಮಾರ್ಗವಿಲ್ಲ. ಅಂತೂ ಈ ವಿಚಾರದಲ್ಲಿ ಬಹು ಜಾಗ್ರತೆಯಿಂದಿರ ಬೇಕಮ್ಮ. ಆದರೆ ಇದೊಂದು ವಿಚಾರ ಇನ್ನೂ ನನಗೆ ಸಂಶಯಪ್ರಾಯ ವಾಗಿಯೇ ನಿಂತಿದೆ. ಏನೆಂದರೆ ಹುಡುಗ ಬದುಕಿ ಉಳಿದು ಆ ಮೋಟರಿನ ವನ ಮೇಲೆ ಕೇಸು ನಡೆದರೆ ಇವರಿಗೇಕೆ ಹೀಗೆ ಕಸವಿಸಿಯಾಗಬೇಕು! ಇದ ರಿಂದಾಗಿ ಇವರ ಮೇಲೇನುಬಂತು? ಇದನ್ನು ನೋಡುವಾಗ ನಮಗೆ ಗೋಚರವಾಗದಿರುವ ಇನ್ನೊಂದು ಸಮಸ್ಯೆಯು ಗೂಢವಾಗಿದೆ ಎಂದು ನನ ಗೇಕೋ ಮನಸ್ಸು ಹೇಳುತ್ತದೆ. ಕಾಲಕ್ರಮೇಣ ಅದು ನಿಮಗೇ ಗೊತ್ತಾಗ ಬೇಕು. ಮತ್ತಾರಿಗೂ ಗೊತ್ತಾಗಲು ಸಾಧ್ಯವಿಲ್ಲ. ಅದು ತಿಳಿದ ಮೇಲೆ ಈ ನರ್ವಸ್‌ನೆಸ್ಸಿನ ಪದೇ ಪದೇ ಪೀಡೆಯನ್ನು ಗುಣಪಡಿಸಲು ಎಷ್ಟೋ ಅನುಕೂಲವಾಗಬಹುದು. ಇದೆಲ್ಲಾ ಮನಸ್ಸಿನ ಪರಿಣಾಮ. ಆ ಮನ ಸ್ಸನ್ನು ನಾವು ಹೇಗೆ ತಿಳಿಯಬೇಕು? ನೀವೇ ಅವರ ಮನಸ್ಸು ಹೊಕ್ಕಿ ಪ್ರಯತ್ನಮಾಡಿ ನೋಡಿರಿ. ಮಾತ್ರ ಉದ್ರೇಕಗೊಳಿಸಬೇಡಿರಿ—

ವಸುಮತಿಯು ಅಲ್ಲಿಂದ ಹೊರಟು ಏಳು ಗಂಟೆ ಹೊಡೆಯುವ ವೇಳೆಗೆ ಮನೆ ಸೇರಿದಳು.

## ಎಸಳು ೧೮ ಪಾಪದ ಪುನರುತ್ಥಾನ

ಸಂಜೆ ಗಾಳಿಗೆ ಮೈಬಿಟ್ಟು ಕುಳಿತಿದ್ದಂತೆ ವಸುಮತಿಗೆ ಜೋಂಪು ಹತ್ತತೊಡಗಿತು. ಆ ಜೋಂಪಿನಲ್ಲಿ ಯಾರೋ ಬಂದು ಹೇಳುತಿರುವಂತೆ ಭಾಸವಾಯಿ—ಇದರಲ್ಲಿ ಇನ್ನೊಂದು ಸಮಸ್ಯೆಯು ಗೂಢವಾಗಿದೆ!–ಅದರೊಂದಿಗೆ ಅವಳಿಗೆ ಗರ್ವವೂ ಬಂದಿತು. ಇದೇನೆಲ್ಲ ಪಿಕಲಾಟಗಳಪ್ಪ! ಹೆಂಡತಿಯಾಗಿ ತನಗೆ ಯಾವ ವಿಚಾರವು ತಿಳಿಯಬೇಕಿದ್ದಿತೊ ಅದು ಕಟ್ಟಕಡೆಗೆ ಕಷ್ಟಪಟ್ಟು ತಿಳಿದಂತಾಯಿತು. ಅದರ ಮೇಲೂ ಇನ್ನೊಂದು ಗೂಢ ವಿಚಾರ! ಹೀಗಿದ್ದ ಮೇಲೆ ತಾನು ಹೆಂಡತಿಯಾಗಿ ಏನು ಪ್ರಯೋಜನ ಬಂತು? ಈ ಗೋಪ್ಯಗಳು—ಗೂಢಗಳು ತನ್ನ ಕೂಡೆಯೂ ತಲೆಮರಸಿಕೊಳ್ಳುವುದೆಂದಾದ ಮೇಲೆ ತನಗೇ ಸ್ಥಾನವೇಕೆ—ಮಾನವೇಕೆ? ನಿಜವಾಗಿಯೂ ಇದೊಂದು ಷಡ್ಯಂತ್ರ! ಇದರ ಮಧ್ಯದಲ್ಲಿ ಆ ಅಂಬುಜಾಕ್ಷಿಯೇ ಮತ್ತೂ ಮತ್ತೂ ಕಾಣಿಸಿಕೊಳ್ಳುವಳು. ಅವಳ ಸಮ್ಮುಖದಲ್ಲಿ ಹುದುಗಿ ಕಾಣುತಿದ್ದ ಭಾವಗಳು ಈಗ ಬಂಡಾಯ ಹೂಡುವಂತೆ ಕಂಡಿತು. ಮೊತ್ತಮೊದಲಿಗೆ ಅವಳ ಆತ್ಮವೇ ಅವಳನ್ನು ಕೇಳಿತು—ನೀನೇಕೆ ಅವಳ ಮುಂದೆ ಬೆಕ್ಕಿನ ಪಿಳ್ಳೆಯಂತೆ ಮೈಮುದುರಿಕೊಂಡು ಮನಸ್ಸು ಮೆಚ್ಚಿ ಕುಳಿತಿದ್ದೆ? ಅವಳಲ್ಲಿ ಅಂತಹದೇನಿದ್ದಿತು? ಅವಳೊಬ್ಬಳು ಮಾಯಾವಿನಿ! ಆದುದರಿಂದಲೇ ನೀನು ಅಲ್ಲಿ ವ್ಯಕ್ತಿತ್ವವನ್ನು ಕಳೆದುಕೊಂಡು ಮಂಗನಂತೆ ಮೂಕಳಾಗಿದ್ದೆ. ಅಲ್ಲಿ ಏನೋ ಆದರ್ಶದ ಮಾತು ಬಂದಿತಲ್ಲ—ಆದರ್ಶ! ನೀನು ಸೂಳೆಯಿಂದ ಪುರಾಣ ಹೇಳಿಸಿಕೊಳ್ಳಲು ಹೊರಟಂತಿದೆ. ಆ ಗತ ಪುರಾಣ ಹೋಗಲಿ. ಅಂಬುಜಾಕ್ಷಿಯೇನೂ ಮುದುಕಿಯಲ್ಲ—ಕುರೂಪಿಯಲ್ಲ. ಅವಳ ಸುಕುಮಾರ ದೇಹದಲ್ಲಿ

ಇನ್ನೂ ನವತಾರುಣ್ಯವು ಸೌಂದರ್ಯವನ್ನು ಬಾಣದಂತೆ ಹೂಡಿನಿಂತಿದೆ. ಅಂತಹ ಹರಿತದ ಬಾಣಕ್ಕೆ ಬೇಟೆಯು ಬೇಡವೆಂದವರಾರು? ನೀನೊಂದು ತಲೆಯಿಲ್ಲದ ಪ್ರಾಣಿ. ಕೊಂಚ ಮೆದುಳು ಕ್ರಿಯನಾಡಿಕೊಳ್ಳಬೇಕು! ಮತ್ತೆ ಈ ವಿಚಾರವನ್ನು ಮೊದಲಿಗೇ ನಿನ್ನ ಗಂಡನಿಂದಲೇ ತಿಳಿಯುವುದ ಕ್ಕಾಗಿ ಕಿವಿಹಿಂಡಿಕೊ! ನಂತರ ನಿನ್ನ ಸಂಸಾರವ •ಸುತ್ತ ನೀನೇ ಕೋಟೆ ಯನ್ನು ಕಟ್ಟಿಕೊ! ಅಲ್ಲಿ ನಿನ್ನ ರಾಜನಿಗೆ ನೀನೇ ರಾಣಿಯಾಗಬೇಕು. ನೀನೇ ಪ್ರಧಾನಿಯಾಗಬೇಕು! ಕೊನೆಗೆ ಇಂತಹ ಅಪಸ್ಮಾರಗಳನ್ನು ದೂರ ಕ್ಕಟ್ಟುವುದಕ್ಕಾಗಿ ದಂಡಯಾತ್ರೆಗೆ ಹೊರಡಬೇಕು! ಅವಳು ಮಾಯಾ ಮೃಗ-ಜಾಗ್ರತೆ! ಅಲ್ಲಿಗೆ ನಿನ್ನ ರಾಮನನ್ನು ಬೆನ್ನಟ್ಟಲು ಬಿಡಬೇಡ. ಇದು ಸೀತಾಪಹರಣವಲ್ಲ—ರಾಮಾಪಹರಣ. ಕಲಿಯುಗದ ರಾಮಾಪಹರಣ!

ವಸುಮತಿಯು ಜ್ಯೋಂಪು ತಿಳಿದೆದ್ದಳು. ಅವಳಿಗೆ ಈ ತನಕ ಕೃತ ಯುಗವಾಗಿ ಕಾಣುತ್ತಿದ್ದುದು ಈಗ ಕಲಿಯುಗವಾಗಿ ಕಾಣಿಸತೊಡಗಿತು. ಅಲ್ಲಿ ಹಾಲೆಂದು ಕುಡಿದುದು ಇಲ್ಲಿ ವಿಷವಾಗಿ ಪರಿಣಮಿಸತೊಡಗಿತು. ಅಲ್ಲಿ ಕತ್ತಲು ಬೆಳಕಾಗಿ ಕಂಡಿದ್ದರೆ ಅದು ಅಂಬುಜಾಕ್ಷಿಯ ವ್ಯಕ್ತಿತ್ವದ ಮಹಿಮೆ. ಸಾಹಚರ್ಯದ ಪ್ರಭಾವ! ಇಲ್ಲಿ ಅಂತಹ ಮಹಿಮೆ ಪ್ರಭಾವಗಳು ಕುಂಠಿತ ಗಳಾಗಿ ಸ್ವಾರ್ಥದ ಕಪಟತನ ಮಾತ್ರ ಮೇಲೆದ್ದು ಅಸೂಯೆಯ ಕಿಡಿ ಕಾರುತ್ತಿದ್ದಿತು. ಕಾರಣ—ಇಲ್ಲಿ ತನ್ನ ದೃಷ್ಟಿಯಿಂದಲೇ ತನ್ನನ್ನು ಕಂಡಾಗ ತಾನು ಬಹಳ ಅಣುವಾಗಿಯೂ ಅಂಬುಜಾಕ್ಷಿಯು ಮಹತ್ತಾಗಿಯೂ ಕಂಡಿತು. ತನ್ನ ವ್ಯಕ್ತಿತ್ವವನ್ನು ಇನ್ನೊಂದರೊಡನೆ ವಿಲೀನೀಕರಿಸಲು ಯಾರು ಮೆಚ್ಚುವರು? ಆದುದರಿಂದ ಅವಳು ತನ್ನ ತನದ ಉಳಿತಾಯಕ್ಕಾಗಿ ಉದಾತ್ತತೆಯನ್ನು ಒಮ್ಮೆಗೆ ಒತ್ತಟ್ಟಿರಿಸಿ ಸ್ವರಕ್ಷಣೆಗಾಗಿ ಚಿಂತಿಸ ತೊಡಗಿ ದಳು. ಆದರೆ ಇಂತಹ ಗ್ರಹಗಳಿಂದ ಹೇಗೆ ಪಾರಾಗಬಹುದೆಂದು ಅವಳಿಗೆ ಗೋಚರವಾಗಲಿಲ್ಲ. ಯೋಚಿಸಿದಷ್ಟೂ ಅದು ಜಿಡುಕಾಗಿ ಕಂಡಿತು. ಆದುದರಿಂದ ಆ ಷಡ್ಯಂತ್ರಗಳನ್ನೆಲ್ಲ ಕೈಗೆ ತೆಗೆದುಕೊಂಡು ಅವುಗಳನ್ನು ಒಮ್ಮೆಗೇ ಮುಗಿಸಿ ಬಿಡಬೇಕೆಂದು ನಿರ್ಧರಿಸಿದಳು. ಆದರೆ ಇವುಗಳನ್ನೆಲ್ಲಾ ಗಂಡನೊಡನೆ ವ್ಯಕ್ತವಾಗಿ ತಿಳಿಸಬೇಕೇ—ಬೇಡವೇ ಎಂಬ ಅವ್ಯವಸ್ಥೆಯಲ್ಲಿ

ಅವಳ ಮನಸ್ಸು ತೂಗತೊಡಗಿತು. ಅಲ್ಲದೆ ಆ ಕೇಸು ಕೋರ್ಟಿಗೆ ಬಂದ ವಿಚಾರವನ್ನು ಅಂಬುಜಾಕ್ಷಿಯ ಕೂಡೆ ಕೇಳಲು ಅವಳು ನಿನ್ನೆ ಮರೆತಿದ್ದಳು. ಇನ್ನೊಮ್ಮೆ ಹೋಗಿ ಕೇಳಿ ತಿಳಿಯುವ ಸ್ಥೈರಣೆಯಿರಲಿಲ್ಲ. ಆದುದರಿಂದ ತನ್ನ ಮೇಲೇನೇ ತಾನು ಗರ್ವಗೊಂಡು ನೇರವಾಗಿ ಗಂಡ ಕುಳಿತಿದ್ದಲ್ಲಿಗೆ ಹೋಗಿ ಆ ಕಾಗದದ ರೇಖಾ ಚಿತ್ರವನ್ನು ಮುಂದಿಟ್ಟು ಇದಿರುಗಡೆ ಕುಳಿತು ಬಿಟ್ಟಳು.

ಇತ್ತೀಚೆಗೆ ರೇಖಾ ಚಿತ್ರ ಬರೆವಣಿಗೆಯಲ್ಲಿ ಪಾಸುಮಾಡಿ ಕೆ. ಕೆ. ಹೆಬ್ಬಾರರನ್ನು ಸೋಲಿಸಬೇಕೆಂದು ಯೋಚಿಸಿದಂತಿದೆ!

ಶ್ರೀಧರಮೂರ್ತಿಯು ಹಾಂ ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು-ಏನಿಲ್ಲ. ಅದು ನನ್ನ ಮನಸ್ಸು ಓಡುವ ರೀತಿ—ಎಂದನು.

ಆದರೆ ನಿಮ್ಮ ರೀತಿಯಲ್ಲಿ ನಾವೆಲ್ಲ ಸತ್ತಿತಲ್ಲ! ನಾನು ಈ ದಿನವೇ ಪಪ್ಪನಿಗೆ ವಯರ್ ಕೊಡುತ್ತೇನೆ—

ಅವನು ಮಾತಾಡಲಿಲ್ಲ.

ವಸುಮತಿಗೆ ಮತ್ತೇನೂ ಹೇಳಲು ತೋರದೆ ಸಿಡುಕಿನಿಂದ—ತೆಗೀರಿ, ನಿಮ್ಮ ಬೀಗದ ಕೈ ಸ್ವಲ್ಪ ಕೊಡಿರಿ—ಎಂದಳು.

ಏಕೆ?

ಕೋರ್ಟಿನಲ್ಲಿ ಆ ಕೇಸು ಬಂದಿದೆಯಲ್ಲ? ಒಂದು ಐನೂರು ರೂಪಾಯಿ ತೆಗೆದು ಆ ದರಿದ್ರಕ್ಕೆ ಕಳುಹಿಸಿಬಿಡುತ್ತೇನೆ. ಅದು ಎಲ್ಲಿಯಾದರೂ ಹೋಗಿ ಸಾಯಲಿ! ಅಂತೂ ನಿಮ್ಮ ತಲೆ ತಿನ್ನುವುದು ಬೇಡ. ಆ ಕೇಸಿಗೆ ಬೆಂಕಿಹಾಕಲಿ! ಹೋದರೆ ನನ್ನ ಅಪ್ಪನ ಗಂಟು ಹೋದೀತು—ಅಷ್ಟೆ ತಾನೆ!—ಎಂದು ಕೀಲಿಯನ್ನು ತೆಗೆದುಕೊಂಡು ಲಗು ಎದ್ದು ಒಳ ಪೆಟ್ಟಿಗೆಯಿಂದ ಐನೂರು ರೂಪಾಯಿಗಳನ್ನು ಎಣಿಸಿ ತಂದು ಒಂದು ಪತ್ರ ಬರೆಯ ತೊಡಗಿದಳು.

ಶ್ರೀಮತಿ ಅಂಬುಜಾಕ್ಷಿಯವರಿಗೆ—ವಸುಮತಿಯಿಂದ ಸುಕ್ಷೇಮ ನಮಸ್ಕಾರ. ನನ್ನ ಈ ಕಾಗದವನ್ನು ಈಗ ಓದುವ ವೇಳೆ ನಿಮಗೆ ನಿನ್ನೆಯ

ಪರಿಸ್ಥಿತಿಗೂ ಇಂದಿನ ರೀತಿಗೂ ಬಹಳ ಅಭ್ಯಂತರ ಕಂಡು ತುಂಬಾ ಆಶ್ಚರ್ಯವೆನಿಸಬಹುದು. ಅಥವಾ ನನ್ನ ದೇಹದೊಳಗೆ ಕೈಕೇಯಿಯ ಹಾಗೆ ಎರಡು ಜೀವಗಳು ತುಂಬಿವೆಯೋ ಎಂತಲೂ ಎಣಿಸಿಕೊಳ್ಳಬಹುದು. ಆದರೆ ನಿನ್ನೆ ತಿಳಿಸಲು ಮರೆತು ಹೋದುದನ್ನು ಈಗ ಅಗತ್ಯವಾಗಿ ತಿಳಿಸಬೇಕಾಗಿ ಬಂದುದರಿಂದ ಉಭಯತರ ಹಿತಕ್ಕಾಗಿ ಈ ರೀತಿ ಬರೆದಿದ್ದೇನೆ. ಮನುಷ್ಯನಿಗೆ ಬಾಹ್ಯಬಂಧನಗಳಿಂದ ಬಿಡುಗಡೆಗೊಳ್ಳಲು ಸುಲಭವಾಗಿ ಬರುವುದು. ಹಾಗೆ ಬಂಧಿತನಾದವನು ಅದನ್ನು ತಿಳಿದಿದ್ದೂ ಪಂಜರದ ಗೂಟವನ್ನು ಹೊಯ್ಯುವುದರಲ್ಲಿ ಅರ್ಥವಿಲ್ಲ—ಉಪಯೋಗವಿಲ್ಲ! ಅದನ್ನೆಲ್ಲಾ ತಿದ್ದಬೇಕಾದರೆ ಹಿಂದೂಸಮಾಜವನ್ನೇ ಸಾಗ್ರವಾಗಿ ತಲೆಬುಡ ಮಾಡಬೇಕಾದೀತು. ಸದ್ಯ ಆ ಒಳ್ಳೇದು ಕೆಟ್ಟದರ ವಿಮರ್ಶೆ ಬಿಟ್ಟುಬಿಡೋಣ.

ನಿನ್ನೆ ನಿಮ್ಮನ್ನು ಕಂಡಾಗ ಈ ವಿಚಾರ ತಿಳಿಯಬೇಕೆಂದಿದ್ದೆ. ನಿಮ್ಮ ಹುಡುಗನ ಮೋಟರು ಪೆಟ್ಟಿನ ನಂಬ್ರವು ಕೋರ್ಟಿಗೆ ಬಂದಿದೆ ಎಂತ ಕೇಳಿದ್ದೇನೆ. ನೀವು ನಿನ್ನೆ ನಮ್ಮವರ ಕುರಿತು ತುಂಬಾ ಭಕ್ತಿವಿಶ್ವಾಸಗಳನ್ನು ಪ್ರದರ್ಶಿಸಿದ್ದಿರಿ. ಇಂತಹ ಅಪಾರ ಶ್ರದ್ಧೆಯನ್ನು ಯಾರು ಮೆಚ್ಚಲಿಕ್ಕಿಲ್ಲ? ಆದರೆ ಅದರ ಮೇಲೆ ನನ್ನದೊಂದು ಅಭ್ಯರ್ಥನೆಯಿದೆ. ನಮ್ಮವರ ಸುಖ ದುಃಖದ ಕಡೆ ನಿಮ್ಮ ಮನಸ್ಸು ಹಾತೊರೆಯುವುದಿಲ್ಲವೆ? ಅವರ ಉನ್ನತಿ ಮನಸ್ಸಿನ ಶಾಂತಿಗಾಗಿ ನಿಮ್ಮ ಹೃದಯವು ಉಕ್ಕೇರುವುದಿಲ್ಲವೆ? ಸೇವೆಗಾಗಿ ಸುಖವನ್ನು ಧಾರೆಯೆರೆದು ತ್ಯಾಗಗೊಳ್ಳಬೇಕಾಗಿದೆ. ಅಂತಹ ಉಜ್ವಲ ತ್ಯಾಗವನ್ನು ನಿಮ್ಮಿಂದ ಆಶಿಸಿದ್ದೇನೆ.

ನಿಮ್ಮ ಹುಡುಗನ ಕೇಸು ಕೋರ್ಟಿಗೆ ಬರುವುದರಿಂದ ಅವರ ಮನಸ್ಸಿಗೆ ಪುನಃ ಅಘಾತ ಸಂಭವಿಸಬಹುದೆಂದು ನಾವು ನಿರ್ಧಾರಕ್ಕೆ ಬಂದಿದ್ದೇವೆ. ನಮ್ಮ ಡಾಕ್ಟರರೂ ಅದೇ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಆದುದರಿಂದ ಒಳ್ಳೇದು ಕೆಟ್ಟದು ಏನೇಯಿರಲಿ—ನೀವಂತೂ ನಿಮ್ಮ ಆದರ್ಶಕ್ಕಾಗಿ ಇದರಲ್ಲಿ ಏನು ಸ್ವಾರ್ಥವಿದ್ದರೂ ಬಿಟ್ಟುಕೊಟ್ಟು ಅದನ್ನು ಕೋರ್ಟಿನಿಂದ ಹಿಂತೆಗೆದುಕೊಳ್ಳಬೇಕೆಂದು ಅವರ ಪರವಾಗಿ ಕೇಳಿಕೊಳ್ಳುತ್ತೇನೆ. ಪೋಲೀಸ್ ವಿಚಾರವನ್ನು ತೀರ್ಮಾನಿಸಿಕೊಳ್ಳುವುದೇನೂ ನಮಗೆ ಕಷ್ಟಬರ

ಲಿಕ್ಕಿಲ್ಲ. ಆದುದರಿಂದ ನಿಮ್ಮ ಕೂಡೆ ಈ ರೀತಿಯಿಂದ ದೈನ್ಯವನ್ನು ವ್ಯಕ್ತ ಪಡಿಸುತ್ತೇನೆ. ಈ ಬೇಡಿಕೆಯನ್ನು ವಹಿಸಿಕೊಂಡು ನಮ್ಮ ಈ ಪೀಡೆ ಯನ್ನು ಪರಿಹರಿಸಬೇಕು. ಅಲ್ಲದೆ—ನಮ್ಮ ಈ ಪುಟ್ಟ ಸುಖಸಂಸಾರದಲ್ಲಿ ಮುಂದಕ್ಕೆ ನಿಮ್ಮ ಯಾವ ತರದ ನೆರಳೂ ಹಾಯದಂತೆ ಅನುಗ್ರಹ ಮಾಡ ಬೇಕೆಂದು ಸೆರೆಗೊಡ್ಡಿ ಬೇಡುತ್ತೇನೆ. ಇದರಿಂದಾಗಿ ನಾನು ನಿಮ್ಮ ಮೇಲೆ ದುರಭಿಪ್ರಾಯಗೊಂಡಿದ್ದೇನೆ—ಎಂಬುದಾಗಿ ನೀವು ಎಂದಿಗೂ ತಿಳಿದು ಕೊಳ್ಳಲಾಗದು. ಸದಭಿಪ್ರಾಯಕ್ಕಾಗಿಯೇ—ಮತ್ತು ಅಂತಹ ಸದಭಿ ಪ್ರಾಯದ ಊರ್ಜಿತಕ್ಕಾಗಿಯೇ ಹೀಗೆ ಮನಸ್ಸು ಬಿಚ್ಚಿ ಬರೆದಿದ್ದೇನೆ. ಅಲ್ಲದೆ ನಿಮ್ಮ ಹುಡುಗನ ಮುಂದಿನ ಏಳಿಗೆಗಾಗಿ ವಿದ್ಯಾಬುದ್ಧಿಗಾಗಿ ಮತ್ತೆ ನಿಮಗೊದಗಿದ ಗಂಡಾಂತರದ ಪೀಡೆಯ ನಿವಾರಣೆಗಾಗಿ ನಾವಿಬ್ಬರೂ ಕೂಡಿ ಆಲೋಚಿಸಿ ನಮ್ಮ ಅಂತಃಪ್ರೇರಣೆಯಿಂದ ಅತ್ಯಲ್ಪವೆಂದೇ ಎಣಿಸಿ ರೂಪ್ಯಾ ಐನೂರನ್ನು ಇದರೊಟ್ಟಿಗೆ ಇಟ್ಟು ಕಳುಹಿಸಿದ್ದೇವೆ. ಇದೇನೂ ಈ ಬಗ್ಗೆ ಲಂಚವಲ್ಲ. ಹಾಗೆಂದೂ ತಿಳಿಯಬಾರದು. ತಾಪತ್ರಯವು ಯಾರನ್ನೂ ಬಿಟ್ಟಿಲ್ಲ. ನಿಮಗೆ ತಾಪತ್ರಯವಿದೆ-ಅಥವಾ ಅದು ನಮ್ಮ ಈ ಹಣದಿಂದ ತೀರುತ್ತದೆ ಎಂಬ ಭಾವನೆಯಲ್ಲ. ಆದರೆ ಇದೊಂದು ಪ್ರಸಾದರೂಪ— ಹಾಗೇನೇ ತಿಳಿದುಕೊಂಡು ಇದನ್ನು ದಯೆಯಿಟ್ಟು ಸ್ವೀಕರಿಸಬೇಕು. ಹೆಚ್ಚೇನು ಬರೆಯಲೂ ಇದು ಸಂದರ್ಭವಲ್ಲ. ಅಥವಾ ತಿಳಿದವರಿಗೆ ಪುನರು ಕ್ತಿಯಾಗಿ ತಿಳಿಸುವ ಅಂತಹ ಸಂದರ್ಭವೂ ಬರಬಾರದು. ಈ ಆಶೆಯಿಂದಲೇ ಪತ್ರ ಬರೆದಿದ್ದೇನೆ.

ನಿಮಗೆಲ್ಲರಿಗೂ ದೇವರು ಒಳ್ಳೇಯದನ್ನೇ ಮಾಡಲಿ—

ಇತಿ ನಿಮ್ಮವಳೇ ಆದ
ವಸುಮತಿ.

ಕಾಗದವನ್ನೊಮ್ಮೆ ಗಂಡನ ಮುಂದೆ ಗಟ್ಟಿಯಾಗಿ ಓದಿ ಜಾಗ್ರತೆ ಯಿಂದ ಲಕೋಟೆಯೊಳಗೆ ತುರುಕಿ ಮತ್ತೊಂದು ದಪ್ಪ ಲಕೋಟೆಯಲ್ಲಿ ಹಣವನ್ನೂ ಕಾಗದವನ್ನೂ ಭದ್ರವಾಗಿರಿಸಿ ಈ ಕಡೆ ಬಂದು ನಂಬಿಕೆಯ ಪೇದೆ ಸಿಂಗಪ್ಪನನ್ನು ಕರೆದು—ನೋಡು ಇದನ್ನು ತಕೊಂಡು ಹೋಗಿ ನಾವು ನಿನ್ನೆ

ಹೋಗಿತ್ತಲ್ಲ ಆ ಮನೆಯ ಯಜಮಾನಿತಿಗೆ ತಲುಪಿಸಿ ಉತ್ತರ ತಾ–ಜಾಗ್ರತೆ– ಎಂದು ಹೇಳಿ ಕಳುಹಿಸಿಕೊಟ್ಟು, ಒಮ್ಮೆಗೆ ಸಮಾಧಾನದಿಂದ ಉಸಿರು ಬಿಟ್ಟಳು. ಉಸಿರು ಬಿಟ್ಟು ಎದೆಯಿಂದ ಒಂದು ಕಣೆಯನ್ನು ಕಿತ್ತೊಗೆದಂತೆ ವಿಶ್ರಾಂತಿಯಿಂದ ಆ ಕಡೆ ಈ ಕಡೆ ತಿರುಗಿ ಮತ್ತೆ ಕೆಲಸದವನೊಡನೆ ಕೇಳಿ ದಳು– –ಏನಪ್ಪ ಪುರೋಹಿತ ಭಟ್ಟರು ಏನು ಹೇಳಿದರು?

ನಾಳೆ ಸಂಜೆ ಬೇಗ ಬರುತ್ತೇನೆಂತ ಹೇಳಿದರು. ಮತ್ತೆ ಯಾವುದಕ್ಕೂ ಬೆಳಿಗ್ಗೆ ಬಂದು ಮಾತಾಡುತ್ತೇನೆಂತ ಸಹ ಹೇಳಲಿಕ್ಕೆ ಹೇಳಿದ್ದಾರೆ.

ಸರಿ. ಒಮ್ಮೆಗೇ ಈ ಎಲ್ಲಾ ಗ್ರಹಚಾರಗಳು ತೀರಿಹೋಗಲಿ–– ಎನ್ನುತ ಮತ್ತೆ ಗಂಡನ ಬಳಿಗೆ ಹೋಗಿ ಕುಳಿತಳು.

## ಎಸಳು ೧೧ ಪೂರ್ಣಾಹುತಿ

ಭೀಮ ಭಟ್ಟರು ಚಿಟುಕೆ ನಶ್ಯವನ್ನು ಬ್ರಹ್ಮರಂಧ್ರಕ್ಕೇರಿಸಿ–ಇದೊಂದು ದೊಡ್ಡ ಸಂಧಿಯಮ್ಮ. ಶುಕ್ರಾದಿತ್ಯ ಸಂಧಿ! ರಾಯರಿಗೆ ಸಪ್ತಮ ಶುಕ್ರ. ಆದರೆ ರವಿ ಚತುರ್ಥದಲ್ಲಿ ಎಂದರೆ ಸುಖಸ್ಥಾನದಲ್ಲಿ ಇದ್ದಾನೆ. ಅದರಿಂದಾಗಿ ಈಗ ಅವರಿಗೆ ಸ್ತ್ರೀ ಪೀಡೆ—ಮನೋವೇದನೆ ಸಹ ಬಹಳವಾಗಿ ಬರಲಿಕ್ಕಿದೆ. ಅದಕ್ಕೆಲ್ಲಾ—ಎಂದು ತಲೆ ತುರಿಸಿದರು.

ಸರಿ. ತಿಳಿಯಿತು. ಅದಕ್ಕೇನು ಮಾಡಬೇಕು ಹೇಳಿರಿ? ಮತ್ತೆ ಅಲ್ಲದ ಸಲ್ಲದ ಸಾವಿರ ಹೇಳಿದರೆ ಅದು ನಮ್ಮಿಂದ ಸಾಧ್ಯವಿಲ್ಲ ನೋಡಿ. ಅದರಲ್ಲೂ ನಮ್ಮ ರಾಯರು ನಾಸ್ತಿಕರಿಗೆ ಬಹಳ ಬಿಟ್ಟುಕೊಡುವುದಿಲ್ಲ. ಆದುದರಿಂದ ನೀವೇ ಯೋಚಿಸಿ ಮರ್ಯಾದೆ ಉಳಿಸಿಕೊಳ್ಳುವ ರೀತಿ ಚಿಕ್ಕದಾಗಿ ಹೇಳಿರಿ.

ಮಹಾ ಮಹಾ ಯಜ್ಞಗಳಲ್ಲಿ ಮನಸಿಟ್ಟಿದ್ದ ಭಟ್ಟರು ಒಮ್ಮೆ ನಿರಾಶರಾಗಿ ಬಾಯಿ ಕಳೆದು ಹೇಳಿದರು. ಹಾಗಾದರೆ ನಾನೇನು ಮಾಡಲಿ? ಇದೆಲ್ಲಾ ಆಗದೆ ನಿರ್ವಾಹವಿಲ್ಲಮ್ಮ. ನೀವೇ ಹಾಗೆ ಹೇಳುವುದಾದರೆ ಈಗಿಂದೀಗಕ್ಕೆ ದುರ್ಗಾಪೂಜೆ ತೊಡಗಬೇಕು. ಮತ್ತೆ—

ಮತ್ತಿದ್ದು ಇರಲಿ. ದುರ್ಗಾಪೂಜೆ ಮೊದಲಿಗೆ ನಡೆಸೋಣ.

ಆಗಬಹುದಲ್ಲ. ಇವತ್ತು ತೊಡಗೋಣ. ಇವತ್ತು ನೋಡಿ ದೇವತಾನುಗ್ರಹಕ್ಕೆ ಸರಿಯಾಗಿ ಮಂಗಳವಾರವೇ ಆಗಬೇಕೆ? ಇದೇ ಶುಭ ಲಕ್ಷಣ!—ಎಂದು ಭಟ್ಟರು ಭಲೆ ಗಾಳಿಯೂದಿದರು. ಎಂದೇ ದೇವೀ ಮಹಾತ್ಮ್ಯ ಪಾರಾಯಣಕ್ಕೆ ಆಗಲೇ ತೊಡಗಿ ಹೋಯಿತು. ಮತ್ತೆ ಸಂಜೆ

ಹೊತ್ತು ಪರಿಸ್ತರಣ ಹಾಕಿ ದೀಪವಿಟ್ಟು ಗಂಟೆ ಬಾರಿಸಿ ಶಂಖವೂದಿ ಪೂಜೆಗೆ ತೊಡಗಿಯೇ ಬಿಟ್ಟರು. ಆ ಪೂಜೆಯಲ್ಲಿ ರಾಯರ ಗ್ರಹಚಾರವನ್ನು ಮಾತ್ರವಲ್ಲ ಮೂರು ಲೋಕದ ಪಾಪವನ್ನೆಲ್ಲಾ ಸುಟ್ಟು ಎಲ್ಲಾ ಗ್ರಹಚಾರಗಳನ್ನೂ ಹಾರಿಸಿ ಬಿಡುತ್ತೇನೆಂಬ ಹವಣಿಕೆ ತೋರುತಿದ್ದಿತು. ಅದು ಆ ಪೂಜೆಯ ಮಹಾತ್ಮ್ಯೆಯೋ—ಭಟ್ಟರ ಮಹಾತ್ಮ್ಯೆಯೋ ಯಾರಿಗೆ ಗೊತ್ತು!

ಪಾಪವನ್ನು ಪುಣ್ಯದಿಂದ ಉಜ್ಜಿತೆಗೆಯಲು ಸಾಧ್ಯವಿದೆಯೇ? ಪಾಪ ಪುಣ್ಯಗಳನ್ನು ಜೀವವು ತಕ್ಕಡಿಯಿಂದ ತೂಗಿ ನೋಡುವುದಲ್ಲ—ಅನುಭವದಿಂದ. ಪಂಚೇರು ಪಾಪಕ್ಕೆ ಪಂಚೇರು ಪುಣ್ಯ ತೂಗಿದರೆ ಅದು ಸಮಸಮವೆಂದು ಹೇಳಿದವರಿದ್ದಾರೆ. ಏಕೆ! ಪುರಾಣಗಳು ಹೇಳಿವೆ! ಅದನ್ನೇ ಭಟ್ಟರೂ ತೊಡಗಿದ್ದಾರೆ. ಪಾಪದ ಹುಣಸೆ ಹುಳಿಯೊಂದಿಗೆ ಪುಣ್ಯದ ಸಕ್ಕರೆಯನ್ನು ತೂಗಲು ತೊಡಗಿದ್ದಾರೆ. ಅದು ಹೇಗೇಯಿರಲಿ. ನೋಡುವ ಆತ್ಮಕ್ಕೆ ಸಮಾಧಾನ ಬೇಕು. ಎಷ್ಟೋ ವೇಳೆ ಹಳ್ಳಿಯ ಕೊಳ್ಳಿದೈವದ ಕುರುಡು ನಂಬಿಕೆಯುಳ್ಳವನಿಗೆ ಸಿಕ್ಕಿದ ಮನಃಶಾಂತಿ ಕಲಿತ ನಾಗರಿಕನಿಗೆ ಸಿಗಲಿಲ್ಲ. ಕಾರಣ—ಹಳ್ಳಿಯವನು ಅಪನಂಬಿಕೆಯಿಂದಾಗಿ ತನ್ನ ಸ್ವಯಂವ್ಯಕ್ತಿತ್ವವನ್ನು ಕಳೆದುಕೊಂಡಿಲ್ಲ.

ವಸುಮತಿಯು ಈ ಪರಿಹಾರಗಳನ್ನೆಲ್ಲ ನಂಬಿದಳೊ ನಂಬಲಿಲ್ಲವೊ ಅಂತೂ ಅವಳ ಸುತ್ತಿನ ಬಿಸಿ ವಾತಾವರಣವು ಅವಳನ್ನು ಸಾಧಕಳನ್ನಾಗಿ ಮಾಡಿದ್ದಿತು. ಅವಳ ಮನಸ್ಸನ್ನು ಸಂತೈಸಲು ಏನಾದರೂ ಒಂದು ಅನನ್ಯ ಭಾವನೆಯು ಅಗತ್ಯವಿದ್ದಿತು. ಎನುವಾಗ ಭೀಮಭಟ್ಟರು ತಮ್ಮ ಬ್ರಹ್ಮಾಂಡ ಪುರಾಣ ಬಿಚ್ಚಿದರೆಂದರೆ ಅದೂ ಒಂದು ರೀತಿಯಿಂದ ವಿಹಿತವೆ.

ಶ್ರೀಧರಮೂರ್ತಿಯು ಮಡಿಯುಟ್ಟು ಈಕಡೆ ಕೋಣೆಯಲ್ಲಿ ಕುಳಿತಿದ್ದನು. ಕೃಷ್ಣಾರ್ಪಣಕ್ಕೆ ಹೆಚ್ಚು ಹೊತ್ತಿಲ್ಲವೆಂದು ಆ ಕಡೆ ಭಟ್ಟರು ಸಾರಿದ್ದರು. ಆಗ ಹೆಂಗಸೊಬ್ಬಳು ಬಂದು ಒಂದು ಲಕೋಟೆಯನ್ನು ಕೈಗೆ ಕೊಟ್ಟು ಹೊರಟು ಹೋದಳು. ಅದು ಯಥಾ ಸ್ಥಿತಿಗಿಂತ ಹೆಚ್ಚು ತುಂಬಿ ಭಾರವಾಗಿದ್ದುದರಿಂದ ಹೆಂಡತಿಯನ್ನು ಕರೆದು—ಇದೇನು ನೋಡು—ಎಂದು ಕೈಗೆ ಕೊಟ್ಟನು.

ವಸುಮತಿಯು ಅದನ್ನು ತೆಗೆದು ನೋಡಿದಳು. ಅವಳು ನಿನ್ನೆ ಕಳು ಹಿಸಿದ್ದ ಐನೂರು ರೂಪಾಯಿ—ಅವಳ ಕಾಗದ—ಒಂದಿಗೆ ಬೇರೊಂದು ಕಾಗದವಿದ್ದಿತು. ಅವಳು ಆಶ್ಚರ್ಯದಿಂದ ಅಲ್ಲೇ ಕುಳಿತು ಗುಣು ಗುಣು ಓದತೊಡಗಿದಳು.

ಪೂಜ್ಯರಾದ ವಸುಮತಿ ದೇವಿಯವರಿಗೆ-ಅಂಬುಜಾಕ್ಷಿಯ ಸಾಷ್ಟಾಂಗ ನಮಸ್ಕಾರಂಗಳು.

ನಿನ್ನೆ ನೀವು ಇವನ್ನು ಕಳುಹಿಸುವ ವೇಳೆ ನಾನು ಮನೆಯಲ್ಲಿ ತುಂಬಾ ಗಡಿಬಿಡಿಯಲ್ಲಿ ಇದ್ದ ಕಾರಣ ಇದನ್ನು ಪೂರಾ ನೋಡಲೂ ಅವಕಾಶವಿಲ್ಲದೆ ಅಂತೆಯೇ ಇಟ್ಟುಕೊಂಡು ಈಗ ಕಳುಹಿಸಿಕೊಡಬೇಕಾಯಿತು. ನನ್ನ ಮೇಲೆ ಕರುಣೆಯಿಟ್ಟು ನೀವಿಬ್ಬರೂ ಹಿತದೃಷ್ಟಿಯಿಂದ ಅಷ್ಟು ಹಣವನ್ನು ಕಳುಹಿಸಿದ ಬಗ್ಗೆ ನಾನು ತುಂಬಾ ಖುಣಿಯಾಗಿದ್ದೇನೆ. ಆದರೆ ಆ ಹಣ ನನಗೇಕೆ? ಏತರ ಸಲುವಾಗಿ ನಾನು ಆ ಹಣವನ್ನು ನಿಮ್ಮಿಂದ ಪಡೆಯ ಬೇಕು? ಅದು ನನ್ನ ಧರ್ಮಕ್ಕೆ ಮೀರಿದ ಮಾತು. ಅದೂ ಅಲ್ಲದೆ ನಾನು ಹೇಗೆಂದು ಬರೆಯಲಿ? ನನ್ನ ಮುದ್ದು ಮೂರ್ತಿಯನ್ನು ನನ್ನ ದೇವರನ್ನು ನಾನು ನಿನ್ನೆ ಕಳೆದುಕೊಂಡಿದ್ದೇನೆ. ಗುಣವಾಯಿತೆಂದು ನಿನ್ನೆ ಆಸ್ಪತ್ರೆ ಯಿಂದ ನನ್ನ ಮೂರ್ತಿಯನ್ನು ಕರೆ ತರಲು ಗಾಡಿ ಹತ್ತಿಸುವ ವೇಳೆ ಕುದುರೆ ಮುಂದೆ ಸರಿದು ಹಿಂದಿನ ಕಾಲ್ಮಣೆಯಿಂದ ಹೆಜ್ಜೆ ತಪ್ಪಿ ನನ್ನ ಮೂರ್ತಿ ಕೆಳಕ್ಕೆ ಬಿದ್ದು ಬಿಟ್ಟನು. ನನ್ನ ಮೂರ್ತಿಯ ತಲೆಗೆ ಪುನಃ ಪೆಟ್ಟಾಗಿ ಅವನನ್ನು ಉಳಿಸಿಕೊಳ್ಳುವುದು ನನ್ನ ಭಾಗ್ಯಕ್ಕೆ ಬರಲಿಲ್ಲ. ನನ್ನ ಕಂದಮ್ಮ ಸದಾಕ್ಕೂ ನನ್ನ ಕೈ ಬಿಟ್ಟೇ ಹೋದ—ಎಂದ ಮೇಲೆ ಈ ಸಾವಿನ ದುಡ್ಡು ನನಗೇಕೆ ಬೇಕಾಗಿದೆ? ನಿಮ್ಮ ಉದ್ದೇಶಕ್ಕಾಗಿ ಕೃತಜ್ಞಳಾಗಿ ಇದನ್ನು ಹಿಂದೆ ಕಳುಹಿಸಿ ದ್ದೇನೆ.

ಮತ್ತೆ ನಿಮ್ಮ ಸಂಸಾರದಲ್ಲಿ ನನ್ನ ನೆರಳು ಹಾಯದಿರಬೇಕೆಂದು ನೀವು ಕೋರಿದ್ದೀರಿ. ನನ್ನ ನೆರಳನ್ನು ಹಾಗೆ ಹಾಯಿಸಬೇಕೆಂಬ ಬಯಕೆ ನನಗೆ ಇದ್ದಿದ್ದರೆ ನಾನು ಅದನ್ನು ಸಾಧಿಸಿಯೇ ಬಿಡುತಿದ್ದೆ. ನನ್ನ ವರ್ಚ ಸ್ಸನ್ನು ಹೇಗೂ ಬೀರುತಿದ್ದೆ. ಅದೇನೂ ಕಷ್ಟ ಸಾಧ್ಯವಾಗಿರಲಿಲ್ಲ. ಆದರೆ

ನಾನು ಅದನ್ನು ಎಣಿಸಿಯೇ ಇರಲಿಲ್ಲ. ಅಂತಹ ನೀಚ ಹೃದಯವು ನನಗಿನ್ನೂ ಬರಲಿಲ್ಲ. ನಾನು ಪೂಜಿಸುವ ದೇವರನ್ನು ದೇವರ ಗುಡಿಯಿಂದಿಳಿಸಿ ಬಚ್ಚಲ ಮನೆಗೆ ಒಯ್ಯಲು ನಾನು ಇಷ್ಟ ಪಡಲಿಲ್ಲ. ಅಥವಾ ಅವರಾಗಿಯೇ ಬಂದಿದ್ದರೂ ನಾನು ಬಾಗಿಲು ಹಾಕಿಕೊಳ್ಳುತಿದ್ದೆ. ನಾನಿಂದು ಅವರ ಪೂಜೆಗೆ ಯೋಗ್ಯಳಲ್ಲ. ಅವರ ಸಹವಾಸಕ್ಕೆ ಪಾತ್ರಳಲ್ಲ. ನನ್ನ ಮನಸ್ಸು ನಿರ್ಮಲವಿದ್ದರೂ ದೇಹವು ಕೆಟ್ಟಿದೆ. ನಿರ್ಮಾಲ್ಯವಾಗಿದೆ. ಆದುದರಿಂದ ದೂರ ದೂರದಿಂದಲೇ ನಾನು ನನ್ನ ಪೂಜೆಯನ್ನು ಸಲ್ಲಿಸುತಿದ್ದೇನೆ. ಅದೂ ಮೂರ್ತಿಯ ಸ್ವರೂಪದಲ್ಲಿ ಕಂಡು. ಇನ್ನೇನು? ಎಲ್ಲವೂ ಮುಗಿಯಿತು ತಾನೆ!

ಹೆಚ್ಚೇನು ಬರೆಯಲಿ? ಎಲ್ಲಾದರೂ ನೆನಪಿದ್ದರೆ ಸಮಯವಾದಾಗ ಈ ಕಡೆ ನಿಮ್ಮ ಹುಡುಗನೊಂದಿಗೆ ಬಂದು ದರ್ಶನ ಕೊಟ್ಟು ಹೋಗುತ್ತಿರಬೇಕಾಗಿ ಬೇಡಿಕೊಳ್ಳುತ್ತೇನೆ. ಮತ್ತೇನು? ಅದೇ ನನ್ನ ಆತ್ಮ ಸಮಾಧಾನ! ಇದನ್ನು ಅವರ ಮನಸ್ಸಿಗೆ ಪರಿಣಾಮಗೊಳಿಸ ಬೇಡಿರಿ. ದಮ್ಮಯ್ಯ! ನಮ್ಮ ಹುಡುಗನಿಗೆ ಆಯುಷ್ಯವಿಲ್ಲವಾದರೆ ಅದು ನನ್ನದೇ ಪಾಪ—

ವಸುಮತಿಯ ಕೈಯಿಂದ ಕಾಗದವು ಉದುರಿ ಹೋಯಿತು. ಅವಳ ಕೈ ನಡುಗುತಿದ್ದಿತು. ಹಾ—ಎಂದು ಉದ್ಗಾರ ಬಿಟ್ಟು—ನಾನು ಇದನ್ನು ಎಣಿಸಿದ್ದಿಲ್ಲ. ದೇವರು ಕ್ಷಮಿಸಬೇಕು!—ಎಂದು ಕೈಮುಗಿದಳು.

ದೇವರು ಯಾರನ್ನು ಕ್ಷಮಿಸಬೇಕು? ನನ್ನನ್ನು!—ಎಂದು ಶ್ರೀಧರಮೂರ್ತಿಯು ಕಣ್ಣೀರು ತುಂಬಿದನು.

ವಸುಮತಿಯು ಅವನ ಕೈಹಿಡಿದು—ನೀವು ಸ್ವಲ್ಪ ತಲೆಗೆ ತೆಗೆದುಕೊಳ್ಳಬೇಡಿರಿ—ಎಂದಳು.

ಆದರೂ ಅವನು ಹೇಳುತ್ತಲೇ ಹೋದನು.

ತಲೆಗೆ ತೆಗೆದುಕೊಂಡುದು ಈಗಲ್ಲ—ಅಂದೇ! ಎಂಟು ವರ್ಷಗಳ ಹಿಂದೆಯೇ ನಾನು ನಿನಗೆ ಅಪಚಾರವನ್ನು ಮಾಡಿದ್ದೆ. ಅದರ ಪರಿಣಾಮವು ಎಲ್ಲಿಬಂದು ನಿಂತಿತು ಗೊತ್ತೆ?

ಅವಳು ಗಂಡನನ್ನು ತಬ್ಬಿ ಹಿಡಿದು ಸ್ವಲ್ಪ ಸಿಡುಕಿನಿಂದ—ಎಲ್ಲಾ ನನಗೆ ಗೊತ್ತಿದೆ; ನಾನು ಎಲ್ಲವನ್ನೂ ಅಂಬುಜಾಕ್ಷಿಯಿಂದಲೇ ಕೇಳಿ ತಿಳಿದಿದ್ದೇನೆ. ಈಗ ಸ್ವಲ್ಪ ನೀವು ಸುಮ್ಮನಿರಿ.

ಸಹಜ. ನಾನೇ ಎಲ್ಲವನ್ನೂ ನಿನಗೆ ತಿಳಿಸಬೇಕಿದ್ದಿತು. ನಾನೊಬ್ಬ ಮಹಾ ಮೂರ್ಖ! ಆದರೂ ಚಿಂತಿಲ್ಲ. ಅವಳಾದರೂ ತಿಳಿಸಿದಳಲ್ಲ. ಚೆನ್ನಾಯಿತು, ಆದರೆ ಅವರಿಂದಲೇ ಎಲ್ಲವೂ ಪೂರ್ತಿಯಾಗಲಿಲ್ಲ. ಇನ್ನೂ ಬಹಳವಾಗಿ ಉಳಿದಿದೆ.

ವಸುಮತಿಯು ಜಿಜ್ಞಾಸೆಯಿಂದ—ಏನದು ಹೇಳಿಬಿಡಬಾರದೆ?—ಎಂದಳು.

ಹೌದು. ಹೇಳಿಬಿಡಬೇಕು. ಬೇರೆ ಉಪಾಯವಿಲ್ಲ. ಈಗ ಅದನ್ನೂ ಹೇಳದಿದ್ದರೆ ಮತ್ತೆ ಯಾವತ್ತೂ ಹೇಳುವಂತಿಲ್ಲ. ಕೊನೆಗೆ ಅದೇ ನನ್ನ ತಲೆ ತಿನ್ನತೊಡಗೀತು! ನೋಡು—ನಾನು ನನ್ನ ಪಾಪದ ಪರಿಣಾಮ ಹೀಗಾದೀತೆಂದು ಅಂದು ತಿಳಿದಿದ್ದಿಲ್ಲ. ಮತ್ತೆ ಇಲ್ಲಿಗೆ ಬಂದ ಮೇಲೆ ತಿಳಿದುಕೊಂಡೆ. ಆದರೆ ಮಾಡುವುದೇನು? ಪಾಪವನ್ನು ಪುಣ್ಯದಿಂದ ತೀರಿಸಲು ಬರುವುದೆ? ಪಾಪವು ಎಂದಿಗೂ ಪಾಪವೇ ಸರಿ. ಅಂತಹ ಪಾಪವು ನನ್ನ ಸಂಸಾರವನ್ನು ಬೆನ್ನಟ್ಟುವುದೆಂದು ಹೆದರಿದೆ. ನನ್ನ ಸ್ಥಾನ ಗೌರವಗಳನ್ನು ತುಳಿದುಬಿಡುವುದೆಂದು ಹೆದರಿದೆ. ಅಂತೂ ಅದೊಂದು ವಿರೂಪವಾದ ಅಂಜಿಕೆ. ಮತ್ತೆ ಅದೇ ಬೆಳೆಯುತ್ತ ಹೋಯಿತು. ಕೊನೆಗೆ—ಎಂದು ಮಾತು ನಿಲ್ಲಿಸಿ ಕಣ್ಣೀರು ಒರೆಸಿಕೊಂಡನು.

ಕೊನೆಗೆ—ಆ ದಿವಸ ಸೈಕಲಿನಲ್ಲಿ ಹೋಗುತ್ತಾ ನಾನೇ—ನಾನೇ ಆ ಕೆಲಸವನ್ನು ಮಾಡಿಬಿಟ್ಟೆ!

ವಸುಮತಿಯು ಹೌಹಾರಿ—ಏನು! ಎಂದಳು.

ಹೌದು. ನಾನು ಮನಸ್ಸುಮಾಡಿ ಸೈಕಲನ್ನು ತಡೆದಿದ್ದರೆ ಪಾಪ! ಹುಡುಗ ಈಕಡೆ ನುಸುಳಿ ಪಾರಾಗುತಿದ್ದ. ಆದರೆ ನಾನಾಗ ಹುಲಿಗಿಂತಲೂ ಹಿಂಸ್ರ ಮೃಗವಾಗಿದ್ದೆ. ಬೇಕೆಂದೇ ಅವನನ್ನು ಈ ಕಡೆಯಿಂದ ಹೆದರಿಸಿ ಪುನಃ ಅತ್ತ

ತಿರುಗಿಸಿ ಬಿಟ್ಟೆ. ಅದರ ಪರಿಣಾಮವೇನಾಯಿತು? ಅದಕ್ಕಾಗಿಯೇ ಅವನ್ನು ಕೋರ್ಟಿನಲ್ಲಿ ಇದಿರಿಸಲು ನಾನು ಶಕ್ತನಾಗಲಿಲ್ಲ.

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ವಸುಮತಿಯ ಕಣ್ಣ ಮುಂದೆ ಅವುಗಳೆಲ್ಲಾ ನಡೆದು ಹೋದಂತೆ ಭಾಸವಾಯಿತು. ಆಗ ಅಂಬುಜಾಕ್ಷಿಯ ಮಹತ್ತಿನ ಮುಂದೆ ತಾನೊಂದು ಅಣುವಾಗಿ ಕಂಡು ಬಂದಳು. ಆ ಕಾಗದಗಳ ಕಡೆ ಕಣ್ಣೆತ್ತಿ ನೋಡಲೂ ಅವಳಿಗೆ ಧೈರ್ಯ ಬರಲಿಲ್ಲ. ಅಂಜಿ ಅಂಜಿ ಸೂಲಿ ಸೇರಿದ ಜಿಂಕೆಯಂತೆ ಗಂಡನ ಬಗಲು ಸೇರಿ ಕಣ್ಣೀರು ಸುರಿಸುತ್ತ—ಅವಳೇ ಮಹಾನುಭಾವಿತಿ!— ಎಂದು ಗುಣು ಗುಟ್ಟಿದಳು.

ಬಂಡಾಯವೆದ್ದ ಬಾಳು ಅನುಭವದ ಅನಂತರ ತಾನಾಗಿಯೇ ಅಲ್ಲಿಗಲ್ಲಿಗೆ ಸ್ಥಗಿತವಾಗುವುದು. ಆಗ ಅದರ ನಿಜವಾದ ಪರಿಣಾಮವು ಇತರರ ಮೇಲೂ ನಡೆದೇ ಹೋಗುವುದು. ಇಬ್ಬರೂ ಅತ್ತರೆ ಇಬ್ಬರೂಕಣ್ಣೀರು ಸುರಿಸಿದರೆ ಆಗ ಜೀವವು ದುಃಖದಲ್ಲೂ ಸಹಭಾಗಿಯನ್ನು ಕಂಡುಕೊಂಡು ಸ್ವಲ್ಪ ಹಗುರಾಗುವುದು. ದುಃಖಕ್ಕೆ ಏಕಾಂತವೇ ಕೆಡುಕು. ದುಃಖವನ್ನು ಹತ್ತು ಮಂದಿಯ ಮುಂದೆ ಬಿಟ್ಟುಕೊಟ್ಟರೆ ಅದು ಕರಗಿ ಕರಗಿ ನೀರಾಗಿ ಹರಿದು ಎಲ್ಲರಲ್ಲೂ ಐಕ್ಯವಾಗಿ ಹೋಗುವುದು. ಆದುದರಿಂದಲೇ ಶ್ರೀಧರಮೂರ್ತಿಯು ತನ್ನ ಹೆಂಡತಿಯೊಡನೆ ಆ ಆಘಾತವನ್ನು ಸಹಿಸಿಕೊಂಡನು.

ಆದರೆ ಭಟ್ಟರು ಬಂದು ಕೃಷ್ಣಾರ್ಪಣಕ್ಕೆ ಕರೆದಾಗ ಆ ಪರಿಹಾರವು ಯಾರಿಗೂ ಬೇಕಾಗಿದ್ದಿಲ್ಲ. ಪಾಪಕ್ಕೆ ಇದಕ್ಕಿಂತಲೂ ಹೆಚ್ಚಿನ ಪರಿಹಾರವೇನಿದೆ? ಜೀವವು ಅಳಬೇಕು—ಅಳಬೇಕು—ಮತ್ತೂ ಅಳಬೇಕು! ಅತ್ತೂ ಅತ್ತೂ ಅದರ ಪಾಪದ ಸೂರೆಯಾಗಬೇಕು. ಸುರಿದು ಬರಿದಾಗಬೇಕು. ಮತ್ತೆ ಆತ್ಮಧೃತಿಯ ತಂಗಾಳಿಯೊಡನೆ ಹೊಸನೋಟದ ಬೆಳಕು ಕಾಣಬೇಕು. ಅದನ್ನೇ ಶ್ರೀಧರಮೂರ್ತಿಯು ಕಂಡನು. ವಸುಮತಿಯೂ ಕಂಡುಕೊಂಡಳು. ಹಾಗೆ ಕಂಡಾಗ ಭೀಮ ಭಟ್ಟರ ಬಾಯಿಪೂಜೆಗೆ ಕೃಷ್ಣಾರ್ಪಣದ ಅಗತ್ಯವೇ ಬರಲಿಲ್ಲ. ಇಬ್ಬರೂ ಕೂಡಿ—ಭಟ್ಟರೆ! ಕೃಷ್ಣಾರ್ಪಣ ನೀವೇ ತೀರಿಸಿ ಬಿಡಿರಿ—ಎಂದರು

ಭಟ್ಟರು ಕೃಷ್ಣಾರ್ಪಣಮಸ್ತು!—ಎಂದು ನೀರುಬಿಟ್ಟು ಮಂತ್ರ ಹೇಳಿದರು.

ಪಾಪೋಽಹಂ ಪಾಪಕರ್ಮೋಽಹಂ ಪಾಪಾತ್ಮಾ ಪಾಪಸಂಭವಃ
ತ್ರಾಹಿಮಾಂ ಕೃಪಯಾ ಕೃಷ್ಣ ಶರಣಾಗತ ವತ್ಸಲ
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ
ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷೋ ಜನಾರ್ದನ

ಆ ಮಂತ್ರ ಈ ಕಡೆ ವರೆಗೂ ಕೇಳಿಸುತ್ತಿದ್ದಿತು. ಅದನ್ನು ಕೇಳಿ ಇಬ್ಬರ ಹೃದಯವೂ ಹೌದೆಂದು ಅವರಲ್ಲೇ ವಿಲೀನವಾಗಿ ಹೋಯಿತು. ಅರ್ಥದೊಡಗೂಡಿದ ಭಾವವಂತೆ ಮಧುರತರವಾಗಿ ಪ್ರತಿಧ್ವನಿಸಿತು!

## ಶ್ರೀ. ಎಸ್. ವೆಂಕಟರಾಜರ ಅಮೋಘ ಕೃತಿಗಳು

(ಕಿರಿಯರ ಪ್ರಪಂಚ, ಉಡುಪಿ ಇವರಿಂದ)

೧. ರಂಗಭೂಮಿ.

೨. ಆಕಾಶಗಂಗೆ.

೩. ಎರಡು ಏಕಾಂಕ ನಾಟಕಗಳು.

೪. ಕವಿತಾ ಕಾಮಿನಿ—ಭಾಗ ೧.

೫. ಸಪ್ತಸಾಗರ.

---

೬. ಅಂಬುಜಾಕ್ಷಿ.

ಅಚ್ಚಿನಲ್ಲಿ—

೭. ಧರ್ಮಶಾಲೆ.

೮. ಕೈಲಾಸದಲ್ಲಿ ಕಮ್ಯೂನಿಸ್ಟರು.

೯. ತುಂಗಮ್ಮನ ತವರುಮನೆ.

೧೦. ಕಾವ್ಯ ಮನೋರಮಾ (ಕನ್ನಡ—ಸಂಸ್ಕೃತ)



**ಶ್ರೀ. ಎಸ್. ವೆಂಕಟರಾಜರು**

ಕನ್ನಡ ಸಾಹಿತ್ಯದ ನವೋದಯದ ಕಾಲದಲ್ಲಿ ಉದೀಯಮಾನರಾದ ಕನ್ನಡದ ಕವಿಗಳು. ದಕ್ಷಿಣ ಕನ್ನಡ ಜಿಲ್ಲೆಯು ಕರ್ನಾಟಕ ಕಾವ್ಯರಂಗಕ್ಕೆ ಅರ್ಪಿಸಿರುವ ಚಿರ ಕಾಣಿಕೆಯ ಕವಿಗಳಲ್ಲಿ ವೆಂಕಟರಾಜರು ಒಬ್ಬರು. ಅವರ ಗೀತೆಗಳಲ್ಲಿ ನಿಸರ್ಗ ಕವಿಸಹಜವಾದ ಮಾರ್ದವತೆಯೂ ಶೈಲಿಯಲ್ಲಿ ಆಂಗ್ಲಗೀತಗಳ ಮೋಹಕ ಲಕ್ಷಣವೂ ಸೇರಿ ಆನಂದದಾಯಕವಾದ ರಸ ಸೃಷ್ಟಿಯುಂಟಾಗಿರುವುದನ್ನು ವಿಮರ್ಶಕರು ಮನಗಂಡಿದ್ದಾರೆ. ಅಪೂರ್ವವಾದ ಶಬ್ದಸಂಪತ್ತಿಗೂ ಭಾವಸಂಪತ್ತಿಗೂ ಆಗರವಾದ "ಕವಿತಾಕಾಮಿನಿ" ಎಂಬ ಕವಿತಾ ಸಂಗ್ರಹವಲ್ಲದೆ "ಆಕಾಶಗಂಗೆ" "ವೀರಭೂಮಿ" "ಸಪ್ತಸಾಗರ" ಎಂಬ ಕಥಾಸಂಗ್ರಹಗಳನ್ನೂ, "ರಂಗಭೂಮಿ" ಎಂಬ ನಾಟಕವನ್ನೂ ಶ್ರೀ. ರಾಜರು ಇದುವರೆಗೆ ಪ್ರಕಟಿಸಿದ್ದಾರೆ. ಇವರ ಬಿಡಿ ಕಥೆ, ಕವನಗಳು ಕರ್ನಾಟಕದ ಪ್ರಸಿದ್ಧ ಪತ್ರಿಕೆಗಳ ಸಾಮಾನ್ಯ ಮತ್ತು ವಿಶಿಷ್ಟ ಸಂಚಿಕೆಗಳಲ್ಲಿ ಪ್ರಕಟಗೊಂಡು ಪ್ರಖ್ಯಾತವಾಗಿವೆ.

ಶ್ರೀ. ರಾಜರು ಉತ್ತಮ ಕಾದಂಬರಿಗಳನ್ನೂ ಬರೆದಿದ್ದಾರೆ. ಅವುಗಳಲ್ಲಿ ಮೊದಲನೆಯದು ಈಗ ನಿಮ್ಮ ಕೈಯಲ್ಲಿರುವ ಅಂಬುಜಾಕ್ಷಿ. ತುಂಗಮ್ಮನ ತವರ್ಮನೆ, ಧರ್ಮಶಾಲೆ ಎಂಬವು ಶೀಘ್ರವೇ ಪ್ರಕಟವಾಗಲಿವೆ.

**ಕು. ಶಿ. ಹರಿದಾಸ ಭಟ್ಟ**, ಎಂ.ಎ.

PRINTED BY K. RAGHAVENDRA RAO AT MAJESTIC PRESS, UDIPI AND PUBLISHED BY HIM ON BEHALF OF SRI KRISHNA PRAKASHANA AT YOGINDRA SADANA, UDIPI, 21-10-'55, 1000 COPIES